# ಸಪ್ತಗಿರಿ

1987



ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸ ಪತ್ರಿಕೆ



ಪ್ರಾತಃಸ್ಮರಾಮಿ ರಮಯಾ ಸಹ ವೇಂಕಟೇಶಂ
ಮಂದಸ್ಮಿತಂ ಮುಖ ಸರೋರುಹ ಕಾಂತಿರಮ್ಯಂ ॥
ಮಾಣಿಕ್ಯ ಕಾಂತಿ ವಿಲಸನ್ಮಕುಟೋರ್ಧ್ವ ಪುಂಡ್ರಂ
ಪದ್ಮಾಕ್ಷ ಲಕ್ಷಮಣಿ ಕುಂಡಲ ಮಂಡಿತಾಂಗಂ ॥ ॥ 1 ॥

ಪ್ರಾತರ್ಭಜಾಮಿ ಕರರಮ್ಯ ಸುಶಂಖ ಚಕ್ರಂ
ಭಕ್ತಾಭಯ ಪ್ರದ ಕಟಿಸ್ಥಲ ದತ್ತಪಾಣಿಂ ॥
ಶ್ರೀವತ್ಸ ಕೌಸ್ತುಭ ಲಸನ್ಮಣಿ ಕಾಂಚನಾಢ್ಯಂ
ಪೀತಾಂಬರಂ ಮದನ ಕೋಟಿಸುಮೋಹನಾಂಗಂ ॥ ॥ 2 ॥

ಪ್ರಾತರ್ನಮಾಮಿ ಪರಮಾತ್ಮ ಪದಾರವಿಂದಂ
ಆನಂದಸಾಂದ್ರ ನಿಲಯಂ ಮಣಿನೂಪುರಾಢ್ಯಂ ॥
ಏತತ್ಸಮಸ್ತ ಜಗತಾಮಿತಿ ದರ್ಶಯಂತಂ
ವೈಕುಂಠಮತ್ರ ಭಜತಾಂ ಕರಪಲ್ಲವೇನ ॥ ॥ 3 ॥

ವ್ಯಾಸರಾಜಯತಿ ಪ್ರೋಕ್ತಂ ಶ್ಲೋಕತ್ರಯಮಿದಂ ಶುಭಂ
ಪ್ರಾತಃಕಾಲೇ ಪಠೇದ್ಯಸ್ತು ಪಾಪೇಭ್ಯೋ ಮುಚ್ಯತೇ ನರಃ ॥

—ಶ್ರೀ ವ್ಯಾಸರಾಜರು.

ಸಂದರ್ಶಿಸಿ ಆನಂದಿಸಿ

# ಶ್ರೀ ವೇದನಾರಾಯಣಸ್ವಾಮಿ ದೇವಾಲಯ, ನಾಗಲಾಪುರ

## ವಾರ್ಷಿಕ ಬ್ರಹ್ಮೋತ್ಸವ

**ದಿನಾಂಕ 13-4-87 ರಿಂದ 22-4-87 ರ ವರೆಗೆ**

| | | |
|---|---|---|
| 14-4-87 | ಮಂಗಳವಾರ | ಧ್ವಜಾರೋಹಣ |
| 18-4-87 | ಶನಿವಾರ | ಗರುಡೋತ್ಸವ |
| 21-4-87 | ಮಂಗಳವಾರ | ರಥೋತ್ಸವ |
| 22-4-87 | ಬುಧವಾರ | ಧ್ವಜಾವರೋಹಣ |

ವಿಶೇಷ ಸೂಚನೆ : ನಾಗಲಾಪುರ ತಿರುಪತಿಯಿಂದ ಮದರಾಸಿಗೆ ಹೋಗುವದಾರಿಯಲ್ಲಿದೆ. 60 ಕಿ. ಮೀ. ದೂರದ ಈ ಸ್ಥಳಕ್ಕೆ ತಿರುಪತಿಯಿಂದ ವಿಶೇಷ ಬಸ್‌ಗಳುಂಟು. ಬ್ರಹ್ಮೋತ್ಸವದ ದಿನಗಳಲ್ಲಿ ಪ್ರತಿದಿನ ಬೆಳಗ್ಗೆ ರಾತ್ರಿಗಳಲ್ಲಿ ವಾಹನಸೇವೆಗಳೂ, ಸಾಂಸ್ಕೃತಿಕ ಕಾರ್ಯಕ್ರಮಗಳೂ ಇರುವುವು. ಹೆಚ್ಚಿನ ವಿವರಗಳಿಗೆ ತಿ.ತಿ.ದೇ. ವಿಚಾರಣಾ ಕಚೇರಿಯಲ್ಲಿ ವಿಚಾರಿಸಿ.

ನೀವೂ ಬನ್ನಿ ನಿಮ್ಮವರನ್ನೂ ಕರೆತನ್ನಿ.

---

ಸಂದರ್ಶಿಸಿ ಆನಂದಿಸಿ

# ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ನಾರಾಯಣವನಂ

## ವಾರ್ಷಿಕ ಬ್ರಹ್ಮೋತ್ಸವ

**10-5-87 ರಿಂದ 19-5-87**

| | | |
|---|---|---|
| 11-5-87 | ಸೋಮವಾರ | ಧ್ವಜಾರೋಹಣ |
| 15-5-87 | ಶುಕ್ರವಾರ | ಗರುಡವಾಹನ |
| 18-5-87 | ಸೋಮವಾರ | ರಥೋತ್ಸವ |
| 19-5-87 | ಮಂಗಳವಾರ | ಧ್ವಜಾವರೋಹಣ |

ವಿಶೇಷ ಸೂಚನೆ : ನಾರಾಯಣವನಂ ತಿರುಪತಿಯಿಂದ ಮದ್ರಾಸಿಗೆ ಹೋಗುವ ದಾರಿಯಲ್ಲಿದೆ. 35 ಕಿ.ಮೀ. ದೂರದ ಈ ಸ್ಥಳಕ್ಕೆ ತಿರುಪತಿಯಿಂದ ವಿಶೇಷ ಬಸ್‌ಗಳುಂಟು. ಬ್ರಹ್ಮೋತ್ಸವದ ದಿನಗಳಲ್ಲಿ ಪ್ರತಿದಿನ ಬೆಳಗ್ಗೆ ರಾತ್ರಿ ವಾಹನ ಸೇವೆಗಳೂ ಸಾಂಸ್ಕೃತಿಕ ಕಾರ್ಯಕ್ರಮಗಳೂ ಇರುವುವು. ಹೆಚ್ಚಿನ ವಿವರಗಳಿಗೆ ತಿ.ತಿ.ದೇ. ವಿಚಾರಣಾ ಕಚೇರಿಯಲ್ಲಿ ವಿಚಾರಿಸಿ.

ನೀವೂ ಬನ್ನಿ ನಿಮ್ಮವರನ್ನೂ ಕರೆತನ್ನಿ

**ತಿ.ತಿ.ದೇ.**




ಗೌರವ ಸಂಪಾದಕರು :

ಎಸ್. ಲಕ್ಷ್ಮೀನಾರಾಯಣ ಐ.ಎ.ಎಸ್.,

ಸಂಪಾದಕ :

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :

ಬಿ ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ,
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ


ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**




ಸಂಪುಟ ೧೯]    ಏಪ್ರಿಲ್ ೧೯೮೭    [ಸಂಚಿಕೆ ೧೧


# ವಿಷಯಸೂಚಿ



ಮುಖಚಿತ್ರ : ಶ್ರೀರಾಮಚಂದ್ರ –ಚಿತ್ರ ಶ್ರೀ ಕೆ. ಜಗದೀಶ್.

ಹಿಂಬದಿಯಲ್ಲಿ : ತಿರುಮಲೆಯ ತೆಪ್ಪೋತ್ಸವದಲ್ಲಿ ಶ್ರೀರಾಮಚಂದ್ರ ಪ್ರಭು.

ಒಳಗಡೆ : ಶ್ರೀರಂಗದ ಉತ್ಸವ ಮೂರ್ತಿ ಹಾಗೂ ಹೊಸದಾಗಿ ನಿರ್ಮಿತವಾದ ರಾಜಗೋಪುರ.

# ಸಂಪಾದಕೀಯ

ಕವಿಯನ್ನು ಸಾಮಾನ್ಯ ಮನುಷ್ಯರ ಸಂಗದಲ್ಲಿರಲು ಲಾಯಕ್ಕಾದವನಲ್ಲವೆಂದು ಅವನನ್ನು ಬೇರೆಯೇ ಸಾಲಿನಲ್ಲಿ ಕೂರಿಸುವುದು ಉಂಟಾದರೂ, ಜಗತ್ತಿನ ಅನಧಿಕೃತ ಶಾಸಕನೆಂದೂ, ಋಷಿಯೆಂದೂ, ದಾರ್ಶನಿಕನೆಂದೂ ವರ್ಣಿಸಿದ ಪ್ರಸಂಗಗಳೂ ಇಲ್ಲದಿಲ್ಲ.

ಹೇಗೇ ಆದರೂ ಅವನು ಸಾಮಾನ್ಯ ಜನದಿಂದ ಬೇರೆಯಾದವನು. ಸಾಮಾನ್ಯ ಜನದಂತೆಯೇ ರಕ್ತ, ಮಾಂಸ, ಮೆದುಳು, ಮನಗಳನ್ನು ಹೊಂದಿದ್ದರೂ ತನ್ನೆಲ್ಲ ಶಕ್ತಿಯನ್ನು ಸತ್ತ್ವವನ್ನು ಸಾಮಾನ್ಯ ಜನ ಉಪಯೋಗಿಸುವುದಕ್ಕಿಂತ ಬೇರೆಯೇ ಆದ ದಿಕ್ಕಿನಲ್ಲಿ ಬಳಸಿ, ಜಗತ್ತು ಇರುವ, ಇರಬೇಕಾದ ರೀತಿಯನ್ನು ಕಟ್ಟಿ ಕೊಡುತ್ತಾನೆ. ಆದರ್ಶಗಳನ್ನು ಆಕಾಶ ಕುಸುಮಗಳು ಎನ್ನುವವರು 'ಕವಿಯನ್ನು ಭ್ರಾಂತನೆಂದು ಕರೆಯಬಹುದಾದರೂ, ಅನುಸರಣೀಯ ಎಂದು ಹೇಳುವ ಜನ ಕವಿಯನ್ನು ಕಣ್ತೆರೆಸುವ ಗುರು ಎನ್ನುವುದರಲ್ಲಿ ಸಂದೇಹವಿಲ್ಲ.

ಆದಿಕವಿಯೆಂದೂ ಅಗ್ರಕವಿಯೆಂದೂ ರಾಮಾಯಣಕಾರನನ್ನು ಕರೆದು ಗೌರವಿಸಿದ್ದೇವೆ. ರಾಮರಾಜ್ಯ ಪರಿಕಲ್ಪನೆಯನ್ನು ನೀಡಿದ ಆತ, ಧರ್ಮಾವಿರುದ್ಧವಾದ ಅರ್ಥಕಾಮಗಳ ಸಾಧನೆಯಲ್ಲಿ ಮನಷ ತೊಡಗುವುದರಿಂದ ಸಮಾಜದ ಅಭಿವೃದ್ಧಿ ಸಾಧ್ಯ ಎಂಬುದನ್ನು ತಾನು ನೇರವಾಗಿ ಹೇಳದೆ ತನ್ನ ಕಥೆಯ ಪಾತ್ರಗಳ ಮೂಲಕ ಸುಲಭವಾಗಿ ಅರ್ಥವಾಗುವಂತೆ ಚಿತ್ರಿಸಿದ್ದಾನೆ. ಅಂತಹ ಚಿತ್ರಗಳನ್ನು ಕೊಡುವುದರ ಮೂಲಕ ಮನುಕುಲಕ್ಕೇ ಮಾರ್ಗದರ್ಶನ ಮಾಡಿದ್ದಾನೆ ಆ ಕಥೆಯ ಪಾತ್ರಗಳ ಸಾತ್ತ್ವಿಕ, ಅಂತಃಸತ್ತ್ವದ ಕಾರಣದಿಂದಾಗಿಯೇ ಅದು ಮುಂದಿನ ಎಷ್ಟೋ ಜನ ಕವಿಗಳಿಗೆ ಇಂದೂ ಅನುಸರಣೀಯವಾಗಿ, ಅನುಕರಣೀಯವಾಗಿ ಕಂಡುಬಂದಿದೆ. 'ತಿಣಿಕಿದನು' ಫಣಿರಾಯ ರಾಮಾಯಣದ ಕವಿಗಳ ಭಾರದಲಿ, ತಿಂತಿಣಿಯ ರಘುವರ ಚರಿತೆಯಲಿ ಕಾಲಿಡಲು ತೆರಪಿಲ್ಲ' ಎನ್ನುವಷ್ಟು ರಾಮಾಯಣಗಳು ಹುಟ್ಟಿದ್ದರೂ ಇನ್ನೂ ಹೊರಬರುತ್ತಲೇ ಇವೆ.

ಇಂತಹ ವಾಲ್ಮೀಕಿಯ ಹಿನ್ನೆಲೆಯಾದರೂ ಏನು? ಆತನ ಪ್ರತಿಭೆಯ ರಹಸ್ಯಮೂಲವಾದರೂ ಏನು? ಎಂಬುದು ಕುತೂಹಲಕಾರಿಯಾಗುತ್ತದೆ. ಋಷಿಮೂಲವನ್ನು ಹುಡುಕಬಾರದು ಎನ್ನುವ ಆರ್ಯೋಕ್ತಿ ಇದ್ದರೂ, ನಮ್ಮಂತೆಯೇ ಇದ್ದ ಒಬ್ಬ ವ್ಯಕ್ತಿ ಶತಶತಮಾನಗಳ ಸಾಂಸ್ಕೃತಿಕ ಸಾಹಿತ್ಯಾಕಾಶವನ್ನು ತನ್ನ ಪ್ರತಿಭಾಸೂರ್ಯ ಪ್ರಕಾಶದಲ್ಲಿ ಪ್ರಭಾವಿತಗೊಳಿಸಲು ಹೇಗೆ ಸಾಧ್ಯವಾಯಿತು ಎಂಬ ಪ್ರಶ್ನೆ ಯೆದ್ದು, ಆತ ನಮ್ಮಂತೆಯೇ ನಡೆದಾಡಿದ್ದರೂ ಆತನ ಒಳಗು ಬೇರೆಯೇ ಆದ ಲೋಹದಿಂದ ತಯಾರಾದದ್ದಿರಬೇಕು ಎನ್ನಿಸುತ್ತದೆ.

ಎಲ್ಲ ವಿಶ್ವಕವಿಗಳ ವಿಷಯವೂ ಅಷ್ಟೆ, ವ್ಯಾಸ, ಹೋಮರ್, ವರ್ಜಿಲ್ ಡಾಂಟೆ, ಎಲ್ಲರೂ ಮನುಷ್ಯ ರೂಪದಲ್ಲಿ ನಡೆದಾಡಿದರೂ ಮನುಷ್ಯರು ಮಾತ್ರವೇ ಆಗಿರಲಿಲ್ಲ. ಜೊತೆಗೆ ಇನ್ನೇನೋ ಆಗಿದ್ದರು ಎನ್ನುವುದು ಮನುಷ್ಯ ಪರಿಸರದಲ್ಲಿ ನಿರ್ಣಯಿಸುವುದು; ಅದನ್ನು ಮರೆತಾಗ ಅತ ನಮ್ಮವ, ಇವ ನಮ್ಮವ ಎಂಬ ಕಿರಿಕಿರಿಯ ಅಪ್ರಧಾನವಾದ 'ನಾವು' ಅವರೊಂದಿಗೆ ಸೇರುವುದು; ಎಲ್ಲ ಸಹಜವೇ.

ತುಸು ಹೊತ್ತು ಅತಿಸಾಧಾರಣವಾದ 'ನಮ್ಮತನ' ವನ್ನು ಬದಿಗಿಟ್ಟು ನೋಡಿದರೆ ಕವಿಯ ಹಿರಿಮೆಯ, ಆತನ ಲೋಕಪರತೆಯ, ಛಾಯೆ ಕಂಡುಬಂದು, ಅದೂ ಕಾವ್ಯದಂತೆಯೇ, ರಾಮಾಯಣದಂತೆಯೇ ಅಹಂಕಾರ ತ್ಯಾಗಕ್ಕೆ ನಿರಹಂತೆಯ ಪ್ರಸಾರಕ್ಕೆ ಕಾರಣವಾಗಿ, ಸಮಾಜಜೀವನ ಸುಖಕರವಾಗಿ ಸಾಗುವುದರಲ್ಲಿ ಸಂದೇಹವಿಲ್ಲ.

ಮನುಷ್ಯನಿಗೆ ಇಂದು ಬೇಕಾದ್ದು ದೃಕ್ ವೈಶಾಲ್ಯ. ಎಲ್ಲರನ್ನೂ ಒಳಗೊಂಡಲ್ಲದೆ ಯಾರೂ ಮುಂದುವರೆಯಲಾಗದು, ಎಂಬ ನಂಬಿಕೆ. ಅದನ್ನುಂಟುಮಾಡುವಲ್ಲಿ ರಾಮಾಯಣವೂ ತನ್ಮೂಲಕ ವಾಲ್ಮೀಕಿಯೂ ನೀಡಿರುವ ಸಂದೇಶ ಅಮರವಾದದ್ದು.

ಈ ರಾಮನವಮಿಯ ಶುಭ ಸಂದರ್ಭದಲ್ಲಿ ವಾಲ್ಮೀಕಿಯ ಪ್ರತಿಭಾವೈಶಾಲ್ಯವನ್ನು ನೆನೆದು ನಾವೂ ವಿಶಾಲಮನರಾಗೋಣ.

# ರಾಮಾಯಣ ಸಂಸ್ಕೃತಿ

ಭಾರತೀಯ ಸಂಸ್ಕೃತಿಗೆ ವೇದಗಳು ಮೂಲ. ಅವು ತಮ್ಮ ಅಮರ ಸಂದೇಶದಿಂದ ಸಂಸ್ಕೃತಿ ಏನೆಂಬುದನ್ನು ಸಾರಿವೆ. ವಿಶ್ವಶಾಂತಿ ಸಾಧನವನ್ನು ಅವು ತಿಳಿಸಿವೆ. ಗುರುಕುಲದಲ್ಲಿ ನಿಷ್ಠೆಯಿಂದ ವ್ಯಾಸಂಗ ಮುಗಿಸಿಬಂದ ವಿದ್ಯಾರ್ಥಿಗೆ ತೈತ್ತಿರೀಯ ಉಪನಿಷತ್ತಿನಲ್ಲಿ ಹೇಳಿರುವ ಅಮರ ಸಂದೇಶ ಎಲ್ಲಕಾಲಕ್ಕೂ ಅನ್ವಯವಾಗುವುದು. ವಿದ್ಯಾರ್ಜನೆ ಮಾಡಿದ ಸಾಧಕನು ಹೇಗೆ ಸಂಸ್ಕೃತಿ ಸಂಪನ್ನನಾಗಿ ದೇಶಾಭ್ಯುದಯಕ್ಕೆ ಸಹಾಯಕನಾಗಿರಬೇಕೆಂಬುದನ್ನು ಬಹು ಚೆನ್ನಾಗಿ ಸೂಚಿಸಲಾಗಿದೆ. "ಸತ್ಯವನ್ನು ಹೇಳು. ಧರ್ಮದಿಂದ ನಡೆ. ವಿದ್ಯಾರ್ಜನೆಯಲ್ಲಿ ನಿರತನಾಗಿರು. ದೇವ ಪಿತೃವಾಕ್ಯಗಳನ್ನು ತಪ್ಪದೆ ನಡೆಸು. ತಾಯಿ, ತಂದೆ, ಗುರುಗಳನ್ನು ದೇವರೆಂದು ಭಾವಿಸು. ಅತಿಥಿ ಪೂಜೆ ಮಾಡು.'' ಸಂಸ್ಕೃತಿಯ ಮೇಲ್ಮೆಯನ್ನು ತಿಳಿಸುವುದಕ್ಕೆ ಇದೊಂದು ಚಿತ್ರ ಸಾಕು. ಇದನ್ನೇ ರಾಮಾಯಣವು ಸಮಗ್ರವಾಗಿ ಬೋಧಿಸುತ್ತದೆ. ಈ ಸಂದೇಶದಂತೆ ರಾಮರಾಜ್ಯದ ಜನರು ನಡೆಯುತ್ತಿದ್ದುದರಿಂದ, ಅಲ್ಲಿ ಸುಖ, ಶಾಂತಿ, ತೃಪ್ತಿ ಎಲ್ಲವೂ ನೆಲೆಸಿತ್ತು.

'ಸಂಸ್ಕೃತಿ' ಮೂರೇ ಅಕ್ಷರದ ಪದವಾದರೂ ಅದರಲ್ಲಿ ಅಡಗಿರುವ ಅರ್ಥ ಬಹು ವಿಶಾಲವಾಗಿದೆ. ಧರ್ಮ, ದೇವರು, ಸತ್ಯ, ಮೋಕ್ಷ ಎಂಬ ಪದಗಳಂತೆ, ಸಂಸ್ಕೃತಿ ಪದವೂ ವಿಶಾಲವಾದ ಅರ್ಥವನ್ನೊಳಗೊಂಡಿದೆ. ಇದರ ಅರ್ಥ ಇಷ್ಟೇ ಎಂದು ಮಿತಿಗೊಳಿಸಲು ಸಾಧ್ಯವಿಲ್ಲ. ಸಖ್ಯ, ಸ್ನೇಹಪರತೆ, ವಿನಯಶೀಲತೆ, ಕೃತಜ್ಞತೆ, ನೀತಿಧರ್ಮಪಾಲನೆ, ಸತ್ಯಧರ್ಮಾನುಷ್ಠಾನ, ಮುಂತಾದ ಸದ್ಗುಣ ಸಂಪತ್ತಿನ ಸಾರಸರ್ವಸ್ವವೇ ಸಂಸ್ಕೃತಿ ಎಂದು ಹೇಳಬಹುದು. ಸಂಸ್ಕೃತಿಯು ಸರಸ್ವತಿಯಂತೆ ಗುಪ್ತವಾದುದು. ಹಿಮಾಲಯದಂತೆ ಗಹನವಾದುದು. ಸಾಗರದಂತೆ ವಿಸ್ತಾರವಾದುದು. ಇದರ ಅದ್ಭುತ ಶಕ್ತಿ ಇಷ್ಟೇ ಎಂದು ನಿರ್ಧರಿಸುವುದು ಕಷ್ಟ.

ಸಂಸ್ಕೃತಿಯು ಪರಮಾತ್ಮನ ವರಪ್ರಸಾದ. ಸ್ವಾಮಿಯು ಧರ್ಮಪ್ರಭು, ವಿಶ್ವಕುಟುಂಬಿ ಎಂಬ ಭಾವನೆ ಭಾರತೀಯರಲ್ಲಿ ಬೆಳೆದು ಬಂದಿದೆ. ಅವನ ಕುಟುಂಬಕ್ಕೆ ಸೇರಿದ ಮಾನವರು ಧರ್ಮದಿಂದ ಬಾಳಬೇಕೆಂಬುದು ಏರ್ಪಟ್ಟಿತು. ಯಾವುದು ಸದ್ಗತಿಗೆ ಸಾಧನವೋ, ಅಭ್ಯುದಯಕ್ಕೆ ಸಹಾಯಕವೋ ಅದು ಧರ್ಮ. ಧರ್ಮವು ಜೀವನದ ಸೂತ್ರ, ವಿಶ್ವದ ಅವಲಂಬನ. ಧರ್ಮಬಾಹಿರರು ಮೃಗ ಸಮಾನ ಎಂದು ಹೇಳಲಾಗಿದೆ. ಧರ್ಮದ ಪೋಷಕವಾಗಿಯೇ ವೇದಪುರುಷನ ವಿರಾಟ್ ಸ್ವರೂಪವೂ ಭಗವದ್ಗೀತೆಯ ವಿಶ್ವರೂಪವೂ ಏರ್ಪಟ್ಟಿತು. ಇದರಿಂದ ಇಡೀ ವಿಶ್ವವು ಪರಮಾತ್ಮನ ವಿಶ್ವಕುಟುಂಬ ಎಂದಾಯಿತು. ಆದುದರಿಂದಲೇ "ಕೃಷ್ಣಂ ಧರ್ಮಂ ಸನಾತನಂ'' ಎಂದು ಹೇಳಲ್ಪಟ್ಟಿತು. ಜಗತ್ತು ಮಾನವನ ಸುಖಕ್ಕೆ ಅಲ್ಲದೆ ವಿಶ್ವಪ್ರೇಮಕ್ಕೆ ಕಾರಣವಾಗಬೇಕೆಂದು ತಿಳಿಸಲಾಯಿತು. ಇಡೀ ವಿಶ್ವವನ್ನು ಒಂದು ಕುಟುಂಬದಂತೆ ಕಾಣಬೇಕೆಂದು ವಸಿಷ್ಠ ಋಷಿಯು ರಾಮನಿಗೆ ಉಪದೇಶ ಮಾಡಿದನು.

ರಾಮಾಯಣವು ಭಾರತೀಯ ಸಾಹಿತ್ಯ ಸಂಪತ್ತು. ಜಗತ್ತಿನಲ್ಲಿಯೇ ಇದು ಉತ್ತಮ ಸಾಹಿತ್ಯವೆಂದು ಪಾಶ್ಚಾತ್ಯ ಮೇಧಾವಿಗಳೂ ಹೊಗಳಿದ್ದಾರೆ. ರಾಮಾಯಣದಲ್ಲಿ ಬರುವ ವ್ಯಕ್ತಿಗಳೆಲ್ಲರೂ ಸಂಸ್ಕೃತಿ ಸಂಪನ್ನರು. ಅವರ ಗುಣಗಳಲ್ಲಿ ಕೆಲವನ್ನಾದರೂ ಅನುಸರಿಸುವುದರಿಂದ ಸಾಮಾಜಿಕ ಸಮಸ್ಯೆಗಳು ಪರಿಹಾರವಾಗಿ ಸುಖಶಾಂತಿ ನೆಲಸುವುದೆಂದು, ಪಾಶ್ಚಾತ್ಯ ಪಂಡಿತರು ಪರಿಗಣಿಸಿದ್ದಾರೆ. ಪಾಶ್ಚಾತ್ಯದೇಶಗಳಲ್ಲಿ ಅನೇಕರು ತಮ್ಮ ದಿನಚರಿಯ ಕಾರ್ಯಾರಂಭಕ್ಕೆ ಮೊದಲು ರಾಮಾಯಣದ ಯಾವುದೋ ಒಂದು ಭಾಗವನ್ನು ಪಠಣ ಮಾಡಿ ಮನಸ್ಸಮಾಧಾನ ಪಡೆಯುವರೆಂದು ತಿಳಿಸಲಾಗಿದೆ. ಹೀಗಿರುವಾಗ ಭಾರತೀಯರಾದ ನಾವು ರಾಮಾಯಣದ ಸಂಸ್ಕೃತಿ ಫಲ ಪಡೆಯಬೇಕಲ್ಲವೇ?

ಸೀತಾರಾಮರು ರಾಮಾಯಣದ ಕಥಾನಾಯಕ ಮತ್ತು ನಾಯಕರಾಗಿರುವರಲ್ಲದೆ, ಸಂಪೂರ್ಣ ಆದರ್ಶಜೀವಿಗಳು. ಜಗತ್ತಿನ ಇನ್ನಾವ ಸಾಹಿತ್ಯದಲ್ಲಿಯೂ ದೊರಕದಂತಹ ಪರಿಶುದ್ಧ ಜೀವನ ಅವರದು. ಇಂತಹ ಸರ್ವೋತ್ತಮ ಸಂಸ್ಕೃತಿ ಪ್ರಧಾನ ಜೀವನ ಚರಿತ್ರೆ ನಮಗೆ ದೊರಕಿದೆ. ಓದುಗರ ಮನಸ್ಸಿನಲ್ಲಿ ಉತ್ತಮ ಉತ್ಕರ್ಷವನ್ನುಂಟುಮಾಡುವ ಕಾವ್ಯ ಇದು. ಮಹಾಪುರುಷರ ಮಾತುಗಳು ಜ್ಞಾನ ದೀಪಗಳು ಅವರು ಸಾಧಿಸಿದ ಧ್ಯೇಯಗಳು ಮಾನವ ಶ್ರೇಯಸ್ಸಿಗೆ ಸೋಪಾನ. ಅವರ ನೀತಿ, ನಡತೆ, ಶೀಲ, ತ್ಯಾಗ– ಮುಂತಾದ ಆಚರಣೆಗಳು ಮಾನವರ ಮನಸ್ಸಿನ ಮೇಲೆ ಉತ್ತಮ ಪರಿಣಾಮವನ್ನುಂಟುಮಾಡುವುವು.

"ನನಗೆ ರಾಜ್ಯಬೇಡ, ಸ್ವರ್ಗಬೇಡ, ಮೋಕ್ಷ ಬೇಡ. ದುಃಖಪೂರಿತ ಪ್ರಾಣಿಗಳ ಸಂಕಟ ಪರಿಹಾರ ಮಾರ್ಗವೊಂದನ್ನು ಬಯಸುವೆನು'' ಎಂಬ ಶ್ರೀರಾಮನ ಮಾತುಗಳನ್ನು ಮನನ ಮಾಡಿದರೆ ಯಾರಿಗೆ ತಾನೆ ಸ್ವಾರ್ಥಿಗಳಾಗಲು ಸಾಧ್ಯ? ಸುಸಂಸ್ಕೃತನಾಗುವುದಕ್ಕೆ ಈ ಮಾತುಗಳು ಸಾಕು. ಹೀಗೆ ಸತ್ಯಕ್ಕೂ, ಲೋಕಕಲ್ಯಾಣಕ್ಕೂ, ಸೌಂದರ್ಯೋಪಾಸನೆಗೂ ವಿಶೇಷ ಗಮನ ಕೊಟ್ಟಿರುವ ಉದಾಹರಣೆಗಳನ್ನು ಸೀತಾ–ರಾಮರ ಚರಿತ್ರೆಯಲ್ಲಿ ಕಾಣಬಹುದು.

ಆಧುನಿಕ ಜಗತ್ತಿಗೆ ರಾಮಾಯಣವು ಏನನ್ನು ಬೋಧಿಸುತ್ತದೆ? ಮಾನವ

ಶ್ರೀ ಡಿ. ಕೃಷ್ಣೈಂಗಾರ್

ಕೋಟಿಗೆ ಇದು ಹೇಗೆ ಮಾರ್ಗದರ್ಶಕವಾಗಿದೆ? ರಾಮಾಯಣವು ಆದರ್ಶಜೀವನದ ಸಂಯೋಜನೆ. ಈ ಅಮರ ಕಾವ್ಯದಲ್ಲಿ ಅಡಗಿರುವ ಆದರ್ಶ ಸಂದರ್ಭಗಳನ್ನು ಗಮನಿಸಬೇಕು. ನೈತಿಕ ಲಕ್ಷಣದ ವರ್ತನೆಯನ್ನು ಅರಿಯಬೇಕು. ಇವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಸೂಚಿಸಬಹುದು.

ಬಾಲಕಾಂಡದಲ್ಲಿ ಕ್ಷಮಾ ಗುಣದ ಮಹಿಮೆಯು ಸರ್ವೋತ್ತಮ ರೀತಿಯಲ್ಲಿ ವರ್ಣಿತವಾಗಿದೆ. ತಾಳ್ಮೆಯು ಬಹು ದೊಡ್ಡ ಗುಣ. ಪುರುಷರಿಗೆ ಹೇಗೋ ಹಾಗೆಯೇ ಸ್ತ್ರೀಯರಿಗೂ ಅದು ಆದರ್ಶಪ್ರಾಯವಾದುದು. ಕ್ಷಮೆ ಎಂದರೆ, ಸೈರಣೆ, ತಾಳ್ಮೆ, ಸಹನೆ, ಮತ್ತು ಧರ್ಮ. ಅದೇ ಯಶಸ್ಸು ಅದೇ ಯಜ್ಞ, ಅದೇ ಸತ್ಯ ಅದರ ಆಧಾರದಮೇಲೆ ಜಗತ್ತು ನಿಂತಿದೆ. ಸತ್ಯದಿಂದ ಸಾಧಿಸಬಹುದಾದುದನ್ನು, ಧರ್ಮದಿಂದ ಸಾಧಿಸಬಹುದಾದ ಮಹತ್ಕಾರ್ಯಗಳನ್ನು, ದಾನದಿಂದ ಸಾಧಿಸಬಹುದಾದುದನ್ನು, ಕ್ಷಮೆಯಿಂದ ಸಾಧಿಸಬಹುದು ಎಂಬ ನೀತಿಯನ್ನು ಇಲ್ಲಿ ಎತ್ತಿ ತೋರಿಸಲಾಗಿದೆ.

ಯುವರಾಜ ಪಟ್ಟಾಭಿಷೇಕಕ್ಕೆ ಮುಂಚೆ ದಶರಥ ಮಹಾರಾಜನು ಶ್ರೀರಾಮನನ್ನು ಹತ್ತಿರ ಕರೆದು ಹೀಗೆ ಹೇಳುವನು. 'ರಾಮಾ! ವಿನಯಶೀಲನಾಗಿರು. ಇಂದ್ರಿಯನಿಗ್ರಹ ಮಾಡು. ಕ್ರೋಧ ಡಂಭಾದಿಗಳಿಗೆ ತುತ್ತಾಗಬೇಡ. ಎಲ್ಲರಲ್ಲಿಯೂ ಪ್ರೀತಿಯಿಂದ, ಸಹಾನುಭೂತಿಯಿಂದ ಇರು. ಭೂತದಯೆ ಪಶ್ಚಾತ್ತಾಪವನ್ನು ಮರೆಯಬೇಡ' ಈ ಮಾತುಗಳು ರಾಮನನ್ನು ಕುರಿತು ಹೇಳಿದ್ದಾದರೂ, ಎಲ್ಲ ಜನರಿಗೂ, ಎಲ್ಲ ಕಾಲಕ್ಕೂ ಅನ್ವಯವಾಗುವುದು.

ಭರತನು ಚಿತ್ರಕೂಟಕ್ಕೆ ಬಂದು ಶ್ರೀರಾಮನನ್ನು ಅಯೋಧ್ಯೆಗೆ ಹಿಂತಿರುಗಿ ರಾಜ್ಯಭಾರ ವಹಿಸಿಕೊಳ್ಳಬೇಕೆಂದು ಪ್ರಾರ್ಥಿಸಿದಾಗ ರಾಮನು ಹೇಳುವ ಬುದ್ಧಿವಾದ ಮಾತುಗಳು ಮಾರ್ಗದರ್ಶಿಯಾಗಿರುವುದು. "ಎಲೈ, ಭರತ, ಧರ್ಮಶ್ರದ್ಧೆ, ಆರ್ಥಿಕ ಸಂಪತ್ತು, ವೈವಾಹಿಕ ಜೀವನದ ಆನಂದ– ಇವೆಲ್ಲ ಸತ್ಯಜೀವನದ ಫಲ. ಪತಿಯು ಪತ್ನಿಗೆ ಹೇಗೆ ಭೂಷಣವೋ, ಹಾಗೆಯೇ ಆಕೆಯ ಸಂಪರ್ಕದಿಂದ ಆದ ಸಂತಾನದಿಂದ ಆರ್ಥಿಕಾಭಿವೃದ್ಧಿಯಾಗುವುದು. ಹೀಗೆ ಧರ್ಮದಿಂದ ಕೂಡಿದ ಅರ್ಥ, ಧರ್ಮದಿಂದ ಕೂಡಿದ ಕಾಮ, ಮೋಕ್ಷಸಿದ್ಧಿಗೆ ಕಾರಣವಾಗುವುದು.''

ಇನ್ನೊಂದು ಸಂದರ್ಭದಲ್ಲಿ ಶ್ರೀರಾಮನು ಭರತನಿಗೆ ಹೇಳುವ ಮಾತುಗಳನ್ನು, ರಾಮಗೀತಾ ಎಂದು ಕರೆಯಲಾಗಿದೆ. ಈ ಹದಿನೆಂಟು ಶ್ಲೋಕಗಳು ಭಗವದ್ಗೀತೆಯ ಹದಿನೆಂಟು ಅಧ್ಯಾಯಗಳಿಗೆ ಮೂಲವೆನ್ನುವಂತಿದೆ. ರಾಮಗೀತದ ತಾತ್ಪರ್ಯ ಹೀಗಿದೆ. "ಮಾನವನು ಅಶಕ್ತ. ತನಗೆ ಇಷ್ಟಬಂದಂತೆ ವರ್ತಿಸಲು ಸ್ವತಂತ್ರನಲ್ಲ. ಅವನನ್ನು ಒಂದು ದೈವೀಶಕ್ತಿ ಯಾವಾಗಲೂ ಆಡಿಸುವುದು. ಆ ಶಕ್ತಿಯ ಇಷ್ಟದಂತೆ ಇವನು ನಡೆಯಬೇಕು. ನಾನು ಕಾಡಿಗೆ ಬರುವುದಕ್ಕೂ, ದಶರಥ ಮಹಾರಾಜನು ಮರಣ ಹೊಂದುವುದಕ್ಕೂ ಆ ದೈವೀಶಕ್ತಿ ಕಾರಣವೇ ವಿನಹ ಕೈಕೇಯಿ ಅಲ್ಲ'' ಅನಂತರ ಶ್ರೀರಾಮನು ತನ್ನ ಪಾದುಕೆಗಳನ್ನು ಭರತನಿಗೆ ಕೊಟ್ಟು ಅದರ ಹೆಸರಿನಲ್ಲಿ ರಾಜ್ಯಭಾರ ಮಾಡುವಂತೆ ತಿಳಿಸಿದನು. ರಾಜ್ಯಾಡಳಿತ ನಡೆಸುವ ಕ್ರಮ, ಮಂತ್ರಿಗಳನ್ನು ಆರಿಸುವ ವಿಧಾನ, ಮಂತ್ರಿಗಳಿಗಿರಬೇಕಾದ ಯೋಗ್ಯತೆ, ರಾಜನಿಗೆ ಒದಗಬಹುದಾದ ಹದಿನಾಲ್ಕು ಅಪಾಯ ಮತ್ತು ಅವುಗಳ ನಿವಾರಣೆ, ಎಲ್ಲವನ್ನೂ ವಿಶದವಾಗಿ ತಿಳಿಸುವನು. ಇದಾವ ರಾಜನು, ಪ್ರಜೆಗಳ ಪ್ರೀತಿಯ ಮೇಲೆ ರಾಜ್ಯ ಕಟ್ಟಬೇಕೆಂದೂ, ಅವರ ಯೋಗಕ್ಷೇಮಾಭಿವೃದ್ಧಿಯೇ ರಾಜನ ನಿರಂತರ ಚಿಂತೆಯಾಗಿರಬೇಕೆಂದೂ ಹೇಳುವನು ಇದು ಎಲ್ಲ ಕಾಲಕ್ಕೂ ಎಲ್ಲ ಜನರಿಗೂ ಅನ್ವಯವಾಗುವುದು

ಅರಣ್ಯಕಾಂಡದಲ್ಲಿ ಶ್ರೀರಾಮನು ಲಕ್ಷ್ಮಣನಿಗೆ ಹೇಳುವ ಮಾತುಗಳು ಆಕರ್ಷಯುತವಾಗಿವೆ. "ಲಕ್ಷ್ಮಣಾ! ಧರ್ಮಿಷ್ಠರಾದ ಸಾಧುಗಳನ್ನು ಎಲ್ಲ ಜಾತಿಗಳಲ್ಲಿ ಕಾಣಬಹುದು. ಮೃಗಪಕ್ಷಿಗಳಲ್ಲಿ ಕೂಡ ಇಂತಹ ಧರ್ಮಬುದ್ಧಿ ಇದೆ. ಜಟಾಯುವು ಗೃಧ್ರಸಾಮ್ರಾಜ್ಯವನ್ನು ಬಿಟ್ಟು ಒಬ್ಬ ವ್ಯಕ್ತಿಯ ರಕ್ಷಣೆಗಾಗಿ ಪ್ರಾಣಾರ್ಪಣೆ ಮಾಡಲಿಲ್ಲವೇ?

ಇನ್ನೊಂದು ಸಂದರ್ಭದಲ್ಲಿ ವಾಲಿಯ ವಾಕ್ಕಿನಿಂದ ಚಮತ್ಕಾರಯುತವಾದ ಮಾತುಗಳು ಹೇಳಲ್ಪಟ್ಟಿವೆ. ಅವನು ತನ್ನ ಮರಣಕಾಲದಲ್ಲಿ ಅಂಗದನನ್ನು ಕುರಿತು ಹೇಳಿದ ಮಾತುಗಳು ಎಲ್ಲ ಕಾಲಕ್ಕೂ ಎಲ್ಲ

(35ನೇ ಪುಟ ನೋಡಿ)

# ಆದಿಕಾವ್ಯದಲ್ಲಿ ಪಕ್ಷಿಗಳು

ಅಪಾರೇ ಕಾವ್ಯಸಂಸಾರೇ ಕವಿರೇಕಃ ಪ್ರಜಾಪತಿಃ–ಎಂಬ ಲೋಕೋಕ್ತಿ ಇದೆ. ತನ್ನದೇ ಆದ ಅಪಾರ ಕಾವ್ಯ ಜಗತ್ತಿನಲ್ಲಿ, ಕವಿ ಸರ್ವಾಧಿಕಾರಿಯಂತೆ ಮೆಱೆದಾಡುತ್ತಾನೆ. ಅವನ ಕಲ್ಪನೆಗಾಗಲೀ, ಮಾತಿಗಾಗಲಿ ಅಡ್ಡಿ ಆತಂಕವಿಲ್ಲ; ಆಡೆತಡೆಗಳಿಲ್ಲ. ಅವನ ಪ್ರತಿಭಾಮಂತ್ರದಂಡ ಸೋಕಿದರಾಯ್ತು, ಪಕ್ಷಿಯೂ ಮಾತಾಡುತ್ತದೆ; ಪರ್ವತವೂ ಹಾರಾಡುತ್ತದೆ, ರುಂಡಗಳುರುಳುತ್ತವೆ, ಬಂಡೆಗಳು ತೇಲುತ್ತವೆ. ಸೃಷ್ಟಿಕರ್ತನಿಗೆ ಅಘಟನ ಘಟನಾಸಾಮರ್ಥ್ಯವಿರುವಂತೆ, ಕಾವ್ಯ ಸೃಷ್ಟಿ ಕರ್ತನಾದ ಕವಿಬ್ರಹ್ಮನಿಗೂ, ಅಂತಹುದೇ ಸಾಮರ್ಥ್ಯವಿದೆ. ರವಿಗಾವುದಗೋಚರ ಕವಿಗದು ಸ್ಪಷ್ಟಗೋಚರ. ಕವಿ ವಾಲ್ಮೀಕಿ ಮಂತ್ರದ್ರಷ್ಟಾರನಾದ ಮಹಾನುಭಾವ, ಆತನ ಸುತೀಕ್ಷ್ಣ ಪ್ರತಿಭೆಗೆ ಮಾನವ ಜೀವನದ ಯಾವ ಅಂಶವೂ ಅಗೋಚರವಲ್ಲ. ಆತನ ಕಾವ್ಯವೆಂದರೆ ಸತ್ಯಶಿವಸೌಂದರ್ಯಗಳು ಏಕೀಭವಿಸಿದಂತೆ. ರಸಭರಿತ ರಘುವರಚರಿತೆಯನ್ನು, ನವರಸಭರಿತವಾದ ಚೇತೋಹಾರಿಯಾದ ಧಾಟಿಯಲ್ಲಿ ರಚಿಸಿದ ಕವಿವರ್ಯ ವಾಲ್ಮೀಕಿ. ಅಖಿಲಲೋಕ ವನ್ದ್ಯ, ಭುವನ ಸಂಪೂಜ್ಯ. ಭಾರತೀಯ ಸಾಹಿತ್ಯದಲ್ಲಿ ಈ ಮಹಾಕವಿಯನ್ನು ನಾನಾ ರೀತಿಯಲ್ಲಿ ಕೊಂಡಾಡಲಾಗಿದೆ. ಕವಿ ಸಂದೋಹವನ್ದ್ಯ ವಾಲ್ಮೀಕಿ ಪ್ರಾತಃ ಸ್ಮರಣೀಯನಾಗಿರುವ ಪರಮಪೂಜ್ಯ.

ಅಷ್ಟಾದಶವರ್ಣನಾ ಭೂಯಿಷ್ಠವಾದ ಆದಿಕಾವ್ಯದಲ್ಲಿ ಖಗಮೃಗಗಳಿಂದ ಹಿಡಿದು, ನಗನಗೇಂದ್ರರವರೆಗೂ, ದಿವಿಜನದಿಯಿಂದ ಹಿಡಿದು, ರಕ್ತಪ್ರವಾಹದವರೆಗೂ, ತಪಸ್ವಿಗಳಿಂದ ಹಿಡಿದು ತಮೋಗುಣ ಪ್ರಧಾನ ವ್ಯಕ್ತಿಗಳವರೆಗೂ, ಭೋಗಿಗಳಿಂದ ಹಿಡಿದು ಮಹಾತ್ಯಾಗಿಗಳವರೆಗೂ, ಅಂತರಿಕ ಅಶಾಂತಿಯಿಂದ ಹಿಡಿದು, ಆನಂದದವರೆಗೂ, ನಾನಾರೀತಿಯ ಭಾವನೆಗಳಿವೆ–ನಾನಾರೀತಿಯ ಜನರಿದ್ದಾರೆ. ನಾನಾರೀತಿಯ ಸನ್ನಿವೇಶಗಳಿವೆ, ನಾನಾರೀತಿಯ ಕಾವ್ಯಕಲಾಕೌಶಲ ಪ್ರದರ್ಶನವಿದೆ. ವಾಲ್ಮೀಕಿಯ ಕಾವ್ಯಚಿತ್ರಶಾಲೆಯಲ್ಲಿ ರಮ್ಯ ವ್ಯಕ್ತಿಗಳುಂಟು, ರಮಣೀಯ ಸಂದರ್ಭಗಳುಂಟು, ಚಿತ್ರವಿಚಿತ್ರ ಪಾತ್ರಗಳುಂಟು.

ಈ ಮಹಾಕಾವ್ಯಕ್ಕೆ ಪ್ರೇರಣೆ ದೊರೆತದ್ದೇ ಕ್ರೌಂಚ ಪಕ್ಷಿಯಿಂದ. ವಿಹಗ ಮರಣಕ್ಕೆ ಮನ ಕರಗಿದ ಮಹರ್ಷಿ,ಓದುಗರು ಮನಸ್ಸು ಕರಗುವಂತೆ, ಕರುಣರಸದ ಮಹಾಪ್ರವಾಹವನ್ನೇ, ತನ್ನ ಕಾವ್ಯದಲ್ಲಿ ಹರಿಸಿದ್ದಾನೆ. ಆದಿಕಾವ್ಯದಲ್ಲಿ ಈ ಕ್ರೌಂಚ ಪಕ್ಷಿಯ ಜತೆಗೆ, ಇನ್ನೆರಡು ಪಕ್ಷಿಗಳಿವೆ. ಒಂದು ಜಟಾಯು, ಇನ್ನೊಂದು ಸಂಪಾತಿ. ಬ್ರಹ್ಮನ ಸೃಷ್ಟಿಯಲ್ಲಿ ಪಕ್ಷಿಗಳು ಮಾತಾಡುವುದಿಲ್ಲ. ಆದರೆ ಕವಿ ಬ್ರಹ್ಮನ ಸೃಷ್ಟಿಯಲ್ಲಿ ಈ ಎರಡು ಪಕ್ಷಿಗಳೂ ಸೊಗಸಾಗಿ ಮಾತಾಡುತ್ತವೆ. ರಾಮಕಾರ್ಯಕ್ಕಾಗಿ ತಮ್ಮ ಕೈಲಾದ ಸೇವೆಯನ್ನೋ ತ್ಯಾಗವನ್ನೋ ಮಾಡುತ್ತವೆ. ರಾಮಕಾರ್ಯಕ್ಕಾಗಿ ತಂತಮ್ಮ ರೀತಿಯಲ್ಲಿ ನೆರವಾದ, ಉದಾತ್ತಗುಣಭೂಷಿತವಾದ ಈ ಎರಡು ಪಕ್ಷಿಗಳು–ಕೇವಲ ಪಕ್ಷಿಗಳಂತೆ ಕಾಣುವುದಿಲ್ಲ. ವ್ಯಕ್ತಿಗಳಂತೆ, ಪರಮಪೂಜ್ಯ ವ್ಯಕ್ತಿಗಳಂತೆ ಕಾಣುತ್ತವೆ. ಆದ್ದರಿಂದಲೇ ಈ ಪಕ್ಷಿಗಳನ್ನು ನೆನೆಸಿಕೊಂಡ ಕೂಡಲೇ ಭಾರತೀಯರ ಕಣ್ಮುಂದೆ ಎರಡು ಮಹಾಚೇತನಗಳು ಸುಳಿಯುತ್ತವೆ, ಮಾನವಾಕಾರ ತಳೆದ ಮಹಾತತ್ತ್ವಗಳಂತೆ ಭಾಸವಾಗುತ್ತವೆ. ಈ ಎರಡು ಪಕ್ಷಿಗಳನ್ನೂ ಮಾನವರಂತೆ ಬಣ್ಣಿಸಲಾಗಿದೆ–ಚಿತ್ರಿಸಲಾಗಿದೆ.

ಪಕ್ಷಿ ಮಾತಾಡೀತೇ? ರಣರಂಗ ಕಲಿಯೊಡನೆ ಸೆಣಸೀತೇ? ಎಂಬ ತರ್ಕ, ಕಾವ್ಯಪ್ರಪಂಚದಲ್ಲಿ ತಲೆ ಎತ್ತಲಾರದು. ತಲೆ ಎತ್ತಬಾರದು. ಇದನ್ನ ಅನುಮಾನವನ್ನ ಮಾನತ್ತಿನಲ್ಲಿರಿಸುವಿಕೆ – ಎನ್ನುತ್ತಾರೆ. (Willing suspension of disbelief) ಹೀಗಾದಾಗಲೇ ಕಾವ್ಯದ ಸೌಂದರ್ಯ–ಆನಂದ ಅನುಭವಕ್ಕೆ ಬರುವುದು. ಈ ಮಾತು ಯಾವುದೇ ಮಹಾಕಾವ್ಯಕ್ಕಾದರೂ ಅನ್ವಯಿಸುತ್ತದೆ.

ವಾಲ್ಮೀಕಿಯ ಮಹಾಕಾವ್ಯ ವೇದಿಕೆಯಲ್ಲಿ ಈ ಖಗದ್ವಯಗಳು ಹೇಗೆ ಮೆಱೆದಿವೆಯೆಂಬುದನ್ನು ನೋಡೋಣ.

ಜಟಾಯುವನ್ನು ನಾವು ಕಾಣುವುದು ಅರಣ್ಯಕಾಂಡದಲ್ಲಿ. ಸಂಪಾತಿಯನ್ನು ಕಾಣುವುದು ಕಿಷ್ಕಿಂಧಕಾಂಡದ ಕೊನೆಯಲ್ಲಿ.

ರಾಮಲಕ್ಷ್ಮಣ ಸೀತೆಯರು ಪಂಚವಟಿಗೆ ಬರುವಾಗ ದಾರಿಯಲ್ಲಿ ಜಟಾಯುವನ್ನು ಕಾಣುತ್ತಾರೆ. ಆತ ತುಂಬ ಮಧುರವಾಗಿ ಮಾತಾಡುತ್ತಾನೆ.

ತತೋ ಮಧುರಯಾವಾಚಾ ಸೌಮ್ಯಯಾ ಪ್ರೀಣಯನ್ನಿವ ಉವಾಚ – ಎಂದಿದೆ ಕವಿವಾಣಿ. ಆತ ದಶರಥನ ಸಮವಯಸ್ಕ ಮಿತ್ರನಂತೆ. ಜಟಾಯುವನ್ನು ಕಂಡು, ಪರಮ ಪೂಜ್ಯಭಾವದಿಂದ, ರಾಮ, ಆತನ ಹುಟ್ಟು ಪೂರ್ವೋತ್ತರವೆಲ್ಲ ವಿಚಾರಿಸುತ್ತಾನೆ.

ಕಶ್ಯಪ ಪ್ರಜಾಪತಿಯ ಮಗಳಾದ ಶುಕಿ ಎಂಬಾಕೆಗೆ ಒಬ್ಬ ಮೊಮ್ಮಗಳಿದ್ದಳು. ಅವಳ ಹೆಸರು ವಿನತೆ. ಇವಳ ಬಂಧುವಾದ ಸುರಸಾ ಎಂಬುವಳ ಸೋದರಿಯ ಹೆಸರು ಕದ್ರು. ಈಕೆ ನಾಗಮಾತೆ, ವಿನತೆಗೆ ಇಬ್ಬರು ಮಕ್ಕಳು. ಒಬ್ಬ ಗರುಡ, ಇನ್ನೊಬ್ಬ ಅರುಣ. ಈ ಅರುಣನ ಹಿರಿಯಮಗ ಸಂಪಾತಿ, ಕಿರಿಯಮಗ ಜಟಾಯು. ಇವರಿಬ್ಬರ ತಾಯಿಯ ಹೆಸರು ಶ್ಯೇನಿ.

ರಾಮಚಂದ್ರನಿಗೆ ಇದೆಲ್ಲ ಕೇಳಿ ಆಶ್ಚರ್ಯವಾಯ್ತು. ಆಗತ್ಯಬಿದ್ದಾಗ ರಘುಪ್ರವರನ ಸೇವೆಗೆ ತಾನು ಸದಾ ಸಿದ್ಧನಾಗಿರುವುದಾಗಿ ಜಟಾಯು ಭರವಸೆ ನೀಡಿದ. ರಾವಣನ ವಜ್ರಮುಷ್ಟಿಯಿಂದ ಸೀತೆಯನ್ನು ಬಿಡಿಸಲು ಜಟಾಯು ಮಾಡಿದ ಸಾಹಸಪ್ರಯತ್ನವನ್ನು ವಾಲ್ಮೀಕಿ ವಿಪುಲವಾಗಿ ಬಣ್ಣಿಸಿದ್ದಾನೆ. ಜಟಾಯು ತುಂಬ ಶಕ್ತಿವಂತ. 'ಪರ್ವತಶೃಂಗಾಭಃ, ತೀಕ್ಷ್ಣ ತುಂಡಃ ಖಗೋತ್ತಮ' ಪರ್ವತಾಕಾರವಾಗಿದ್ದ ಜಟಾಯುವಿಗೆ ಕೊಕ್ಕು ತುಂಬ ಬಲವಾಗಿಯೂ ಚೂಪಾಗಿಯೂ ಇತ್ತಂತೆ. ಆತ ರಾವಣನಿಗೆ ಅನೇಕ ರೀತಿಯಲ್ಲಿ ಹಿತವಚನಗಳನ್ನು ಹೇಳಿದ. ಸ್ತ್ರೀಯರನ್ನು ರಕ್ಷಿಸ ಬೇಕಾದ್ದು ರಾಜನ ಕರ್ತವ್ಯವೆಂದು ತಿಳಿಸಿದ. ಧರ್ಮಮಾರ್ಗದಲ್ಲೇ ನಡೆಯುವುದು ಶ್ರೇಯಸ್ಕರವೆಂದ

ನ ತತ್ ಸಮಾಚರೇದ್ಧೀರೋ
ಯತ್ ಪರೋಸ್ಯ ವಿಗರ್ಹಯೇತ್

ಬೇರೆಯವರ ನಿಂದನೆಗೂ, ಆಕ್ಷೇಪಣೆಗೂ ಗುರಿಯಾಗುವಂತಹ ಕಾರ್ಯವನ್ನೆಂದೂ ಮಾಡಬಾರದು–ಎಂದು ಬುದ್ಧಿವಾದ ಹೇಳಿದ. ಜಟಾಯು ಪಕ್ಷಿಕುಲದ ರಾಜನಂತೆ. ರಾವಣನನ್ನು ಕಾಣುವ ವೇಳೆಗೆ, ಜಟಾಯುವಿನ ವಯಸ್ಸು 60 ಸಹಸ್ರ ವರ್ಷ!! ಆದರೇನು–

ಯುಧ್ಯಸ್ವ ಯದಿ ಶೂರೋಽಸಿ ಮುಹೂರ್ತಂ ತಿಷ್ಠ ರಾವಣ-ಎಂದು ಅಬ್ಬರಿಸಿ ನುಡಿಯುತ್ತಾನೆ. ಜಟಾಯುವಿನೊಡನೆ ಬಲವಾಗಿ ಹೋರಾಟ ನಡೆಸಿದ ರಾವಣನ ಕವಚ ಹರಿಯಿತು. ರಥಮುರಿಯಿತು, ಸಾರಥಿ ಮಡಿದ. ಜಟಾಯುವಿನ ಪರಾಕ್ರಮ ಕಂಡು, ಜಗತ್ತಿನ ಶ್ರೇಷ್ಠ ಜೀವಿಗಳೆಲ್ಲ ಜಯ ಜಯಕಾರ ಮಾಡಿದವು.

ವಿದ್ವಾನ್ ಬ. ನ. ಗುಂಡೂರಾವ್

ಸಾಧು ಸಾಧ್ವಿತಿ ಭೂತಾನಿ ಗೃಧ್ರರಾಜಮ ಪೂಜಯನ್॥ ರಾವಣನಲ್ಲಿದ್ದ ಆಯುಧಗಳೆಲ್ಲ ನಾಶವಾಗಿ ಕೊನೆಗೊಂದೇ ಒಂದು ಖಡ್ಗ ಉಳಿಯಿತು. ಅದರಿಂದ ಜಟಾಯುವಿನ ರೆಕ್ಕೆಗಳನ್ನು ಕತ್ತರಿಸಿ ಹಾಕಿದ. ಪಕ್ಷೌ ಪಾದೌಚ ಪಾರ್ಶ್ವೌಚ ಖಡ್ಗ ಮುದ್ಧೃತ್ಯ ಸೋಽಚ್ಛಿನತ್॥ ಆಗ ಜಟಾಯು ಕೆಳಗುರುಳಿದ. ರಾಮಚಂದ್ರನಿಗೆ ಸೀತಾಪಹರಣದ ಸುದ್ದಿ ತಿಳಿಸುವುದಕ್ಕಾಗಿ ಕೇವಲ ತನ್ನ ಇಚ್ಛಾಶಕ್ತಿಯಿಂದ ಪ್ರಾಣವನ್ನು ಉಳಿಸಿಕೊಂಡಿದ್ದ. ರಾಮಲಕ್ಷ್ಮಣರು ಸೀತಾದೇವಿಯನ್ನು ಹುಡುಕುತ್ತ ಬಂದಾಗ–ಸಾದೇವಿ ಮಮ ಚ ಪ್ರಾಣಾ ರಾವಣೇನೋಭಯಂ ಹೃತಂ – ಸೀತಾದೇವಿಯನ್ನೂ ನನ್ನ ಪ್ರಾಣಗಳನ್ನೂ ರಾವಣ ಕೊಂಡೊಯ್ದಿದ್ದಾನೆ–ಎಂದು ತಿಳಿಸಿದ ಜಟಾಯು, ರಾವಣನ ಬಗ್ಗೆ ವಿಶದ ವಿವರಗಳನ್ನು ಹೇಳುವಷ್ಟರಲ್ಲಿ ಮೃತನಾದ. ರಾಮ ಲಕ್ಷ್ಮಣರಿಗೆ ಈ ಮಹಾನ್ ಜೀವದ ಸಾವು ಕಂಡು ದುಃಖ ಒತ್ತರಿಸಿ ಬಂತು–ಕಂಬನಿ ಧಾರೆಧಾರೆಯಾಗಿ ಹರಿಯಿತು. ಜಟಾಯು ಮರಣದ ಮುಂದೆ ಸೀತೆಯನ್ನು ಕಳೆದುಕೊಂಡ ದುಃಖವೂ ಸಹ, ರಾಮನಿಗೆ, ಅತ್ಯಲ್ಪವಾಗಿ ಕಂಡುಬಂತು. ಇಕ್ಷ್ವಾಕುಕುಲ ದೀಪಕರಾದ ರಾಮಲಕ್ಷ್ಮಣರು ಜಟಾಯುವಿಗೆ ಶಾಸ್ತ್ರೋಕ್ತವಾಗಿ ಅಗ್ನಿ ಸಂಸ್ಕಾರ ಮಾಡಿದ ಅನುಗ್ರಹ ಮಹತ್ತರವಾದದ್ದು.

ಯಾಗತಿರ್ಯಜ್ಞಶೀಲಾನಾಂ
ಆಹಿತಾಗ್ನೇಶ್ಚ ಯಾಗತಿಃ
ಅಪರಾವರ್ತಿನಾಂ ಯಾಚ
ಯಾಚ ಭೂಮಿಪ್ರದಾಯಿನಾಂ
ಮಯಾ ತ್ವಂ ಸಮನುಜ್ಞಾತಾ
ಗಚ್ಛಲೋಕಾನನುತ್ತಮಾನ್
ಗೃಧ್ರರಾಜ ಮಹಾಸತ್ತ್ವ
ಸಂಸ್ಕೃತಶ್ಚ ಮಯಾ ವ್ರಜ
ಏವಮುಕ್ತ್ವಾ ಚಿತಾಂ ದೀಪ್ತಾಂ
ಆರೋಪ್ಯ ಪತಗೇಶ್ವರಂ
ದದಾಹ ರಾಮೋ ಧರ್ಮಾತ್ಮಾ
ಸ್ವಬಂಧುಮಿವದುಃಖಿತಃ॥

ಆಹಿತಾಗ್ನಿಯ ಉಪಾಸಕರು, ಯಜ್ಞಯಾಗಾದಿಗಳನ್ನಾಚರಿಸಿ ಧನ್ಯರಾದವರು, ಯುದ್ಧದಲ್ಲಿ ಸೋತು ಹಿಮ್ಮೆಟ್ಟದವರು, ಭೂಮಿದಾನ ಮಾಡಿದವರು–ಇವರೇ ಮುಂತಾದ ಪುಣ್ಯಶಾಲಿಗಳು ಪಡೆಯುವ ಸದ್ಗತಿಯನ್ನು ನೀನು ಹೊಂದು–ಎಂದು ಪ್ರಭು ರಾಮಚಂದ್ರ ಪಕ್ಷಿರಾಜನಿಗೆ ದಿವ್ಯಾನುಗ್ರಹ ಮಾಡುತ್ತಾನೆ. ಜಟಾಯುವನ್ನು ಚಿತೆಯ ಮೇಲಿಟ್ಟು ಅಗ್ನಿ ಸ್ಪರ್ಶಮಾಡಿದ ರಘುವಂಶ ದೀಪಕರು ತಮ್ಮ ಆಪ್ತ ಬಂಧುವನ್ನು ಕಳೆದುಕೊಂಡವರಂತೆ ವ್ಯಥೆ ಪಟ್ಟರು. ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ–ಎಂಬ ಗೀತಾವಾಕ್ಯಕ್ಕೆ ಇದಕ್ಕಿಂತ ಬೇರೆ ನಿದರ್ಶನ ಬೇಕೇನು?

ಸಂಪಾತಿಯ ವೃತ್ತಾಂತ ಇನ್ನಷ್ಟು ರೋಚಕವಾಗಿದೆ. ಈತ ಸೀತಾನ್ವೇಷಣಾಕಾರ್ಯಕ್ಕೆ ವಾಚಾ ಸಹಾಯ ಮಾಡುತ್ತಾನೆ

(33ನೇ ಪುಟ ನೋಡಿ)

# ಮಹಾಸತಿ ಮಂಡೋದರಿ

ಮಹಾಕವಿ ಕುವೆಂಪು ಅವರು ತಮ್ಮ ಮಹಾಕಾವ್ಯ 'ಶ್ರೀರಾಮಾಯಣ ದರ್ಶನಂ' ನಲ್ಲಿ ಹಲವಾರು ಅಮೃತಮಯಿ ಸ್ತ್ರೀಮೂರ್ತಿಗಳನ್ನು ಕಂಡರಿಸಿ ನಿಲ್ಲಿಸಿದ್ದಾರೆ. ಅವರಲ್ಲಿ ಪ್ರಾತಃಸ್ಮರಣೀಯಳೂ, ಮಹಾಸತಿಯೂ ಆದ ಮಂಡೋದರಿ ತನ್ನ ಜ್ವಲಂತ ವ್ಯಕ್ತಿತ್ವದಿಂದ ನಮ್ಮ ಮನದಾಳದಲ್ಲಿ ನಟ್ಟು ನಿಲ್ಲುತ್ತಾಳೆ. ಮೂಲ ರಾಮಾಯಣದಲ್ಲಿ ರೇಖಾಮಾತ್ರವಾಗಿ ಚಿತ್ರಿತವಾಗಿರುವ ಇವಳು 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದಲ್ಲಿ ಕವಿಪ್ರತಿಭೆಯ ಹೊಂಬೆಳಕಿನಲ್ಲಿ 'ಮರುವುಟ್ಟುವಡೆದು' ಸಜೀವ ಪುತ್ಥಳಿಯಾಗಿ ಚಿರಸ್ಥಾಯಿಯಾದ ಸ್ಥಾನ ಪಡೆದಿದ್ದಾಳೆ.

ಮಂಡೋದರಿ ದೇವಿ ರಾವಣನ ಪ್ರೀತಿಪಾತ್ರಳಾದ ಮೊದಲ ಮಡದಿ. ಲಂಕೇಶ್ವರಿ, ಪರಮಸುಂದರಿ. ಆದರೆ ಅವಳ ಸೌಂದರ್ಯಕ್ಕಿಂತ ಈ ಕಾವ್ಯದಲ್ಲಿ ಎದ್ದು ಕಾಣುವುದು ಅವಳ ಉಜ್ವಲ ವ್ಯಕ್ತಿತ್ವ, ಹದಿಬದೆತನದ ಹಿರಿಮೆ, ಉದಾತ್ತ ಮನೋಭಾವ, ಅಸ್ಸಾದೃಶ ಧರ್ಮದೃಷ್ಟಿ, ಮಾನವೀಯತೆ ಮುಂತಾದ ಸದ್ಗುಣಗಳು. ಅವಳು ರಾವಣನ ವಿಜಯ, ಸಾಧನೆ, ಹಿರಿಮೆ, ಜೀವನದ ಪರಿಪಕ್ವತೆಗಳ ಪ್ರೇರಕಶಕ್ತಿ. ರಾವಣನೇ ಸ್ವಯಂ ಹೇಳುವಂತೆ, ಅವನನ್ನು ಪುಣ್ಯಪಥಕ್ಕೊಯ್ದ ದೇವಿ.

ತನ್ನರಮನೆಯ ದೇವಪೂಜಾಮಂದಿರದಲ್ಲಿ, ಭಗವಂತನಾರಾಧನೆಯಲ್ಲಿ ತಲ್ಲೀನಳಾಗಿದ್ದ ಮಂಡೋದರಿ, ಪತಿ ಸೀತೆಯನ್ನು ಕದ್ದುತಂದ ಭೀಕರವಾರ್ತೆಯನ್ನು ಕೇಳಿ 'ದೇವಪೂಜಾ ವ್ರತಂ ಪೊಳ್ಳಾದುದಾ ಎನಗೆ' ಎಂದು ತಲ್ಲಣಿಸಿದಳು. ಸೀತೆಯನ್ನು ಕಾಣುವ ಕಾತರತೆಯಿಂದ ಅವಳು ಮೇಲೇಳುತ್ತಿರಲು ರಾವಣನೆ ಅವಳನ್ನರಸುತ್ತ ಅಲ್ಲಿಗೆ ಬಂದನು. ಒಡನೆಯೆ ಈಶ್ವರನಿಗೆ ಕೈಮುಗಿದು 'ಕುಗ್ಗಿ ಕುಸಿದಂತಿರ್ದ ದೀನದುಃಖದ ಸತಿಯ' ಬಳಿ ಬರಲು ಅವಳು ತಲೆ ಎತ್ತಲಿಲ್ಲ. ಆದರೆ ತೊಟ್ಟಿಟ್ಟ ಕಂಬನಿಗೆ ನೆಲ ತೊಯ್ದಿತು. ರಾವಣನು ಅದನ್ನು ಕಂಡು ನಿಡುಸುಯ್ದು 'ದೇವಿ ನಿನ್ನರಕೆಯೇಂ, ಏಕೀ ಕಂಬನಿ' ಎಂದು ಕೇಳಲು ಪತಿಗತ ಪ್ರಾಣೆಯಾದ ಮಂಡೋದರಿ 'ಸತಿಗರಕೆಯೇಂ... ಪತಿಹೃದಯಮಂ ಪಡೆಯುವುದಲ್ಲದೆಯೆ ಬೇರಾವುದರಕೆ?' ಎಂದು ಉತ್ತರಿಸುತ್ತಾಳೆ. ಅದರ ಅಂತರ್ಯವನ್ನರಿತ ರಾವಣ "ನಿನ್ನವನೆ ನಾನೇಗಳುಂ" ಎಂದು ನಂಬಿಕೆ ನುಡಿಯುತ್ತಾನೆ. 'ಅಯ್ಯೊ, ಆ ಪುಣ್ಯ ನನಗೆಂದು ದೊರಕುತ್ತದೆಯೊ' ಎಂದು ಮಂಡೋದರಿ ದುಃಖಿಸಲು, ರಾವಣನು 'ಗ್ರಹದ ನಿಷ್ಠೆಯನೇತಕೆ ರವಿಯ ನಿಷ್ಠೆಗೆ ಸರಿಸಮ ಮಾಡುವೆ? ರಾವಣನ ಒಲುಮೆ ಸದಾ ಸಂಪೂರ್ಣ. ಭಾಗಗೊಂಡುದರಿಂದ ಅದಕ್ಕೆ ಅಪೂರ್ಣತೆಯಿಲ್ಲ' ಎಂದು ನುಡಿಯಲು ರಾಣಿ, ಹೆಡೆಯೆತ್ತುವಂತೆ ಫಣಿ, ತಲೆ ಎತ್ತಿ ರಾವಣನನ್ನು ದೃಷ್ಟಿಸಿ ನೋಡುತ್ತಾಳೆ. 'ಹದಿಬದೆಯ ಹೃದಯದುರಿ ಲಂಕೆಯುಂ ಸಹಿಸದೆ? ಕುಲಕ್ಷಯಕೆ ಕೂಣಿಯೊಡ್ಡಿದೆ ಮೃತ್ಯು' ಎಂದವಳ ಮಾತುಗಳನ್ನು ಅಪಹಾಸ್ಯಗೈದು ರಾವಣನು 'ಮತ್ತಮತ್ತದೆ ಮಾತು, ಪುಸಿಮನೆಗೆ ಪುಸಿಗೋಡೆ' ಎಂದು ಅಣಕವಾಡುತ್ತಾನೆ. ಅದು ಮಂಡೋದರಿಯನ್ನು ಕೆರಳಿಸುತ್ತದೆ. ಹದಿಬದೆಯ ಶಕ್ತಿಯಲ್ಲಿ ಶಂಕೆಯೆ? "ಪ್ರಾಣೇಶ, ದೈತ್ಯೇಂದ್ರ, ಮಹೋತ್ತರ್ವನಿದ್ದಿದ್ದರೀ ತೆರನ ರಾವಣಂ, ತೋರುತಿರ್ದಳ್ ನಿನಗೆ ಹದಿಬದೆಯರಿರ್ಪುದಂ ಹದಿಬದೆತನದ ಹಿರಿಮೆಯುಂ ನಿನ್ನ ಈ ಮಯನ ಮಗಳಬಲೆ' ಎಂದು ದೃಢಯಿಂದ ನುಡಿಯುತ್ತಾಳೆ. ಈ ಮಾತುಗಳು, ಅವಳ ಆತ್ಮವಿಶ್ವಾಸಕ್ಕೂ, ಹದಿಬದೆತನದ ಹಿರಿಮೆಯಲ್ಲಿ ಅವಳಿಗಿದ್ದ ನಂಬಿಕೆಗೂ ಹಿಡಿದ ಕನ್ನಡಿಯಾಗಿವೆ. ಆ ದಿಟ್ಟ ನೋಟಕ್ಕೆ, ದನಿಯ ದಾರ್ಢ್ಯಕ್ಕೆ, ಧರ್ಮ ಧೈರ್ಯಕ್ಕೆ ರಾವಣನ ಎದೆ ಅಳುಕುತ್ತದೆ. 'ದೇವಿ, ಕರುಣಿಸು ಸಂಹರಿಸು ದಿಟ್ಟಿ ಸಿಡಿಲಂ, ರಾವಣಗೆ ಜಗಪಾಲ ದಿಗುಪಾಲ ರಾಟೋಪ ಪಾಗ್ರಕಂ ಸೀರ್ಪುಲ್ಗೆ ಸಾಟಿ, ದಿಟಮಾದೊಡಂ, ನಿನ್ನೊಳ್ಮೆ ಹುಬ್ಬುಗಂಟಿಕ್ಕೆ ಧೈರ್ಯಚ್ಯುತಂ, ದೆಸೆಗೇಡಿ ತಾನ್ ಪರದೇಶಿ ಮೇಣ್ ಶೂನ್ಯಚಿತ್ತನ್" ಎಂದು ಅಂತರಂಗವನ್ನೆ ಬಿಚ್ಚಿ ತನ್ನೆದೆಯ ಒಳತೋಟಿಯನ್ನೆಲ್ಲ ಅವಳೆದುರು ತೋಡಿಕೊಳ್ಳುತ್ತಾನೆ. ಅದನ್ನು ಕೇಳಿ ಪ್ರೀತಿ ಕರುಣೆಗಳಿಂದ ಮಂಡೋದರಿ ಕರಗಿ ಹೋಗುತ್ತಾಳೆ. ಸೀತೆಯನ್ನು ಸಂದರ್ಶಿಸಿ ಬರಲು ಅನುಮತಿ ಬೇಡುತ್ತಾಳೆ. ರಾವಣನು 'ನಿನ್ನ ದರ್ಶನದಿಂದ ಪಾಣ್ಬೆಗಕ್ಕುಂ ಮಹಾಪತಿವ್ರತೆಯ ದೃಢತೆ ಸೀತೆಯು ಮಾತದಂತಿರ್ಕೆ' ಎಂದು ಅದನ್ನು ನಿರಾಕರಿಸುತ್ತಾನೆ. ಅವಳ ಮಾತುಗಳಿಂದ ಕಲಕಿದ ಮನದಿಂದ ಹೊರಹೊರಡುತ್ತಾನೆ. ದೇವಿ ಅವನನ್ನು ದೀನವಾಣಿಯಿಂದ ಕರೆದು, ಪ್ರಸಾದವನ್ನಿತ್ತು ಕೈ ಮುಗಿಯುತ್ತಾಳೆ. ಅವಳ ಆತ್ಮಶಕ್ತಿಯೆದುರು ತಲೆಬಾಗಿ ರಾವಣನು 'ನೀ ಮಹಿಮಳಾನಲ್ಪನೆಂ ದೇವಿ, ನಿನ್ನೊಳ್ಪು ಶಿಕ್ಷಿಸಲಿ ರಕ್ಷಿಸಲಿ ನನ್ನನ್ನು' ಎಂದು ಹಾರೈಸುತ್ತಾನೆ.

ಸೀತೆಯನ್ನು ನೋಡಲು ಮಂಡೋದರಿ ಅಪೇಕ್ಷಿಸಿದಾಗ ರಾವಣ ಅನುಮತಿ ನೀಡಲಿಲ್ಲ. ಪತಿಯಾಜ್ಞೆಯನ್ನು ಪತಿವ್ರತೆ ಮಂಡೋದರಿ ಮೀರುವವಳಲ್ಲ. ಆದರೆ ಅವಳಿಗೆ ಸೀತೆಯನ್ನು ಕಾಣಬೇಕೆಂಬ, ಅವಳಲ್ಲಿ ಕ್ಷಮೆ ಬೇಡಬೇಕೆಂಬ ಹಂಬಲ. ಅದಕ್ಕಾಗಿ ಅಶೋಕವನಕ್ಕೆ ಬಂದು ಸೀತೆಯ ಪರ್ಣಕುಟಿಗೆ ತುಸುದೂರದಲ್ಲಿಯೆ ನಿಂತು, ಕೈಮುಗಿದು ದರ್ಶನವನ್ನು ನೀಡಲು ಅವಳನ್ನು ಬೇಡುತ್ತಿರುತ್ತಾಳೆ. ಅಮ್ಮತರಾತ್ರಿಯೆ ಲಲನೆ ಯಾಕ್ಕತಿಯಾಂತು ಬಂದವೋಲಿದ್ದ ಈ ಮೂರ್ತಿ ಏಳು ರಾತ್ರಿಗಳು ಇಂತು ಬಂದು ಮೊರೆಯಿಟ್ಟು ಹಿಂತಿರುಗುತ್ತಿದ್ದುದನ್ನು ಕಂಡು ಸೀತೆ ಕನಿಕರದಿಂದ ಕರಗಿ ಎಂಟನೆಯ ರಾತ್ರಿ ತಾನೆ ಅವಳಲ್ಲಿಗೆ ಬಂದು ನುಡಿಸುತ್ತಾಳೆ. 'ಆರಮ್ಮ ತಂಗೆ ನೀನು, ಬಂದು ಗೋಳಾಡುತಾವುದನೊ ಸಂಕಟವನೊರೆಯುತಿಹೆ, ಆರನೊ ಕರೆಯುತಿಹೆ, ಆರನೊ ಬೇಡುತಿಹೆ, ಕೈಮುಗಿದದಾರ್ಗೊ ರಕ್ಷೆಯಂ ಪಡೆಯಲೋಸುಗ ನೋಂತವೋಲಿಡೆ ನೋಂಪಿಯಂ". ಮಂಡೋದರಿಯ ಮನದ ಆಳವನ್ನು, ಅಳಲನ್ನು ಅರಿತವಳಂತೆ ನುಡಿಯುತ್ತಾಳೆ ಸೀತೆ – 'ನನ್ನಂತೆ ನೀನುಂ ಅಸುರನ ದೌಷ್ಟ್ಯವೆಳೆತಂದ ಗರತಿವೆಣ್ಣಿರವೇಳ್ಕುಂ' ಎಂದು ಶಂಕಿಸುತ್ತಾಳೆ. ಅದಕ್ಕೆ ಮಂಡೋದರಿ 'ನಾನಕ್ಕನೆನ್ ತಂಗೆ ವಯಸ್ಸಿನಿಂದೆಂತಂತೆ ದುಕ್ಕದಿ ಎನಿತೊ ಸೀತೆಯರಳಲ ಪೊತ್ತಿರ್ಪಂಗೆ ನಾನ್ ಮಡದಿಯೆನ್' ಎಂದು ಹೇಳುತ್ತಾಳೆ. ಮಂಡೋದರಿಯೆ ನೀನು-ಎಂದು ಹರ್ಷ ವಿಸ್ಮಿತೆಯಾಗುತ್ತಾಳೆ ಸೀತೆ. 'ನಿನ್ನ ಧವಳ ಕೀರ್ತಿಯನ್ನು ನಾನು ಕೇಳಿ ಒಲ್ಲೆನು. ಇಂದು ಕಂಡು ಧನ್ಯೆಯಾದೆನು. ಪತಿವ್ರತೆಯಾಗಿ ನೀನು ನಮಗೆಲ್ಲ ಆದರ್ಶಮಾತೆ. ನಿನಗೆ ನಮಸ್ಕರಿಸಲು ನನಗೆ ಮಂಗಳವಾಗುವುದೆಂದು ನಾನು ಒಲ್ಲೆನು.' ಎಂದು ನಮಿಸುತ್ತಾಳೆ. ತನ್ನ ಹೃದಯಾಂತರಾಳವನ್ನೆಲ್ಲ ಸೀತೆಯ ಮುಂದೆ ಬಿಚ್ಚಿ ಹರಡುತ್ತಾಳೆ. ಮಂಡೋದರಿ ತನ್ನ ಪತಿಗಾಗಿ ಪ್ರಾರ್ಥಿಸುತ್ತಾಳೆ. ಮಂಡೋದರಿಯ ಪತಿಪ್ರೇಮದ ಅಗಾಧತೆಗೆ ನಾವು ಬೆಂಗಾಗುತ್ತೇವೆ. 'ನಿನ್ನ ಮಂಗಳನೆನಗೆ ಮಂಗಳಂ. ನನ್ನಂತೆ ದೇವಿ ನೀನುಂ ಪ್ರಾರ್ಥಿಸಾ ನನ್ನ ಪತಿಯೆರ್ದೆಗೆ ಶುದ್ಧಿ ದೊರಕೊಳ್ವಂತೆ. ನಾಪದನೆ ಬೇಡಲ್ಕೆ ಬರುತಿರ್ದೆ ನೀಯೆಡೆಗೆ ನಿನ್ನ ಸಾನ್ನಿಧ್ಯಕ್ಕೆ' ಎಂದು ಪ್ರಾರ್ಥಿಸುತ್ತಾಳೆ. ಸೋದರೀ ವಾತ್ಸಲ್ಯದಿಂದ, 'ಹದಿಬದೆತನಕೆ ಮೀರ್ದ ಸಾಧನೆಯಿಲ್ಲ ತಂಗಿ' ಎಂದು ಉಪದೇಶಿಸುತ್ತಾಳೆ. ಕೊನೆಗೆ, 'ಕೊಳೆಗೆ ತಗುಳಲ್ಕಗ್ನಿ ಕೊಳೆಯುಮುರಿಯುವುದಂತೆಯ ನಿನ್ನ ನೋಂಪಿಯಿಂ ಕಿಡುಗೆನ್ನ ಪತಿಯ ಹೃದಯದ ಪಾಪ ಕಿಲ್ಬಿಷಂ. ಸನ್ಮತಿಯುದಿಸಿ ಶಾಂತಿ ಸುಖಮುಕ್ಕೆ

ಶ್ರೀಮತಿ ಸುಮನಾ ಬದರೀನಾಥ್

ಸರ್ವರಿಗೆ, ಎಂದು ಹಾರೈಸಿ ಆ ಬೆಳದಿಂಗಳಿನಲ್ಲಿ ಕರಗಿ ಹೋದಂತೆ ಕಣ್ಮರೆಯಾಗುತ್ತಾಳೆ.

ಹೀಗೆ ಮಂಡೋದರಿಯ ವ್ಯಕ್ತಿತ್ವ ನಮ್ಮ ಕಣ್ಣುಗಳೆದುರಿನಲ್ಲಿಯೇ ಅಗಾಧವಾಗಿ ಬೆಳೆಯುತ್ತಾ ಹೋದಂತೆ ನಾವು ಮುಗ್ಧರಾಗತೊಡಗುತ್ತೇವೆ.

ಆಂಜನೇಯನು ಸೀತಾದೇವಿಗಾಗಿ ಲಂಕಾ ನಗರಿಯನ್ನೆಲ್ಲ ಶೋಧಿಸುತ್ತ, ರಾವಣನ ಅರಮನೆಯ ಸುತ್ತಲಿದ್ದ ಉದ್ಯಾನವನವನ್ನೆ ಅಶೋಕವನವೆಂದು ಬಗೆದು ಸಂತೋಷಿಸುತ್ತಾ, ಅಲ್ಲಿದ್ದ ದೇವಕುಟಿಯೊಂದನ್ನು ಪ್ರವೇಶಿಸುತ್ತಾನೆ. ಅಲ್ಲಿ ಶಿವಶಿವಾಣಿಯರ ಮೃಲ ವಿಗ್ರಹಗಳ ಚರಣ ತಲಗಳಲ್ಲಿ ಶಿರಬಾಗಿದ್ದ ಬೆಳ್ಪುಡೆಯುಟ್ಟಾ ಕೃಶಾಂಗಿಯಂ, ಶೋಕಾರ್ತೆಯಂ, ದೀನೆಯಂ ಪುಣ್ಯಮುಖಿಯಾದ ಸ್ತ್ರೀಯನ್ನು ಸೀತೆಯೆಂದು ಭ್ರಮಿಸುತ್ತಾನೆ. ಅವಳು ಮಂಡೋದರಿ. ಪತಿಪ್ರೇಮಕ್ಕಾಗಿ ಪಶುಪತಿಯಲ್ಲಿ ಪ್ರಾರ್ಥಿಸುತ್ತಿರುತ್ತಾಳೆ. 'ಪತಿಗೆ ನೀಡಾತ್ಮಶಾಂತಿಯಂ, ಮತಿಗೆ ಮಂಗಳವೆಸಗು, ನೀಡೆನಗೆ ಪತಿಭಿಕ್ಷೆಯಂ, ಮದನ ಚಿತೆಗೆನ್ನ ಪತಿ ಬೇಳ್ವಿಯಾಗದ ತೆರದಿ ರಕ್ಷಿಸೆನ್ನಯ ತನವಂ. ತಾಯೆ ಗಿರಿಜಾತೆ, ನೀಂ ತಪಂಗೈದೆಂತು ಪಡೆದೆಯೊ ನಿನ್ನರಮಣನಂ, ನಾನಂತೆ ಪಡೆವವೊಲ್ ಎನ್ನ ಮನದನ್ನನಾತ್ಮಮಂ ಕೃಪೆಗೆಯ್ ಫಲಪ್ರದೇ' ಎಂದು ಮನಕರಗುವಂತೆ ಬೇಡುತ್ತಿರುತ್ತಾಳೆ. ಆಕೆಯ ದುಃಖವನ್ನು ಸಹಿಸಲಾಗದೆ, ಅವಳನ್ನು ಸಂತೈಸಲೆಂದೆಣಿಸಿ, ಆಂಜನೇಯ, 'ರಾಮಚಂದ್ರಂ ಗೆಲ್ಗೆ, ಜನಕನಂದಿನಿ ಬಾಳ್ಗೆ' ಎಂದು ಘೋಷಿಸಿದ ತಕ್ಷಣವೇ ಮಂಡೋದರಿ ಚಿಟ್ಟನೆ ಚೀರುತ್ತಾಳೆ. ಅದನ್ನು ಕೇಳಿ ಸನಿಹದಲ್ಲೆ ಅವಳನ್ನು ರಕ್ಷಿಸಲೆಂದು ಕಾವಲಿದ್ದ ರಾವಣ ಅಲ್ಲಿಗೆ ಪ್ರವೇಶಿಸುತ್ತಾನೆ. ಆಂಜನೇಯ 'ಈ ಮಹಾಪುರುಷನಾರ್ ಕಾಣೆನಿನ್ನೆಗಂ ಇವಂಗೆಣೆಯ. ಓಜಸ್ವಿಯಂ' ಎಂದು ಅಚ್ಚರಿಪಡುತ್ತಾನೆ.

'ನಾನೆ ಕಾವಲಿರೆ, ನಿನಗದೇಂ ಭೀತಿ, ಚೀರುದದೇಕೆ? ಎಂದು ರಾವಣ ಪ್ರಶ್ನಿಸುತ್ತಾನೆ. ಅದಕ್ಕೆ ಮಂಡೋದರಿ ನಡುಗುತ್ತಾ, 'ನಿನಗೆ ಸೈಪಂ ಬೇಡುತಿರಲಾರೊ ಬಳಿಯೊಳಿಯೆ ರಾಮಚಂದ್ರಂ ಗೆಲ್ಗೆ, ಜನಕನಂದಿನಿ ಬಾಳ್ಗೆ' ಎಂದು ಉದ್ಗರಿಸಿದಂತಾಯ್ತು, ಅದರಿಂದ ನಾನು ಚೀರಿದನೇನೊ ನಾನರಿಯೆ ಎನ್ನುವಳು. 'ನಿನ್ನ ಸಿರ ಹರಕೆಯನೆ ನಿನ್ನ ಕಿವಿಧ್ಯಾನ ಸಮಯದೊಳಾಲಿಸಿತು ಎಂದ ರಾವಣನಿಗೆ ಅವಳಿತ್ತ ಉತ್ತರದಲ್ಲಿ ಅವಳ ಹೃದಯ ಹೊನಲಾಗಿ ಹರಿದಿದೆ. "ನಿನಗೆ ಅಶುಭವನೆಂತು ನೆನೆಯುವೆನ್ ಜೀವೇಶ", "ನನಗೆ ಅಶುಭವನಲ್ಲ. ಅವರಿಗೆ ಶುಭವನ್ನು", "ಸರ್ವರ್ಗೆ ಶುಭಮಿರ್ಕೆ, ಪ್ರಭೂ, ಕಲ್ಯಾಣ ಕಲ್ಪತರು, ಲೋಕಗುರು ಶಿವನಿದಿರ್ ಪ್ರಾರ್ಥನೆಗೆ ಕಾರ್ಪಣ್ಯಮೇಕೆ" ಎನ್ನುವಳು. ಎಲ್ಲರಿಗೂ ಶುಭವನ್ನೆ ಬಯಸುವ ವಿಶಾಲ ಹೃದಯ, ಉದಾತ್ತ ಮನೋಭಾವ ಅವಳದು. ಹಾಗಾದರೂ ಮಾಡಿ, ಸೀತೆಯತ್ತಣಿಂದ ರಾವಣನ ಮನವನ್ನು ವಿಮುಖಗೊಳಿಸಬೇಕೆಂಬ, ಪತಿವ್ರತೆಯ ನೋಂಪಿಯನ್ನು ರಕ್ಷಿಸಬೇಕೆಂಬ, ಧರ್ಮದ ದಾರಿಗೆ ಪತಿಯನ್ನು ನಡೆಸಬೇಕೆಂಬ ಸಾಹಸ ಅವಳದು. ರಾವಣನಿಗೆ ಪರಿಪರಿಯಾಗಿ ಹಿತವಚನಗಳನ್ನು ಹೇಳುತ್ತಾಳೆ. ಅವನು 'ನಾಳೆ ಸೂರ್ಯೋದಕ್ಕೆ ನಾನೊಬ್ಬನೇ ಸೀತೆಯನ್ನು ನೋಡಲು ಹೋಗುತ್ತೇನೆ. ನಿನ್ನ ರಾವಣ ಸುಮ್ಮನೆ ಸೋಲುತ್ತಾನೆ ಎಂದು ತಿಳಿಯದಿರು' ಎಂದು ಹೇಳಲು ರಾವಣನ ಚರಣಗಳಲ್ಲಿ ಉರುಳಿ ಬೇಡುತ್ತಾಳೆ. 'ಬೇಡ ಬೇಡ ಹಟದ ಸಾಹಸಂ, ರಾಜೇಂದ್ರ, ರುಚಿಗೆ ಕೈಗೊಂಡುದಂ ಫಲಕೆ ಮುಂಬರಿಪುದೇಂ, ಸುಖನೆ, ಸರಸನೆ, ಮತಿಯೆ, ಸಚ್ಚರಿತ್ರನೆ, ಜೀವಿತೇಶ್ವರ ? ಪತಿವ್ರತೆಯ ಸುವ್ರತದ ಮಹಿಮೆಯಂ, ಸಂಯಮನೆರ್ದೆಗೊಳಲ್, ಸೋಲೆಂಬರೇನದಂ ಸುಕೃತ ಮತಿಗಳ್? ಶಿವಕೆ ಶರಣಾದರದು ಸೋಲೆ, ಆ ಗೆಲ್ಗೆ ಮಿಗಿಲೊಳದೆ ಬೇರೆ ಗೆಲ್ಲಂ ? ಇಂದ್ರ ವಿಜಯಿಗಿಂ ನೂರು ಮಡಿ ವೀರ ವಿಕ್ರಮಿಯಲ್ತೆ ಇಂದ್ರಿಯ ವಿಜಯಿ? ಬರಿಯೆ ಈ ಬಿಂಕಪಂಕವಂ ತೊರೆ, ಸೋಲು ಸತ್ಯಕ್ಕೆ ನಮಗದುವೆ ಗೆಲ್, ಸೋಲು ಧರ್ಮಕ್ಕೆ ನಮಗದುವೆ ಗೆಲ್', ಎಂದು ನಾನಾವಿಧವಾಗಿ ಬೇಡಿಕೊಳ್ಳುತ್ತಾಳೆ.

ಇದನ್ನೆಲ್ಲವನ್ನೂ ಕಾಣುತ್ತಿದ್ದ; ಕೇಳುತಿದ್ದ ಹನುಮಹೃದಯದಲ್ಲಿ ರಾವಣನ ಮೇಲೆ ಕರುಣೆ ಕಣ್ಮಲರುತ್ತದೆ. ಪೂಜ್ಯೆ ಈ ಸತಿಗೆ ತನ್ನ ಪತಿಯಾತ್ಮದುದ್ಧಾರ ಕಾರ್ಯದಲ್ಲಿ ನೆರವಾಗುವೆನೆಂದು, ಮತ್ತೊಮ್ಮೆ 'ರಾಮಚಂದ್ರಂ ಗೆಲ್ಗೆ. ಜನಕನಂದಿನಿ ಬಾಳ್ಗೆ' ಎಂದು ಘೋಷಿಸಿ, ರಾವಣ ಮಂಡೋದರಿಯರು ಭಯಚಕಿತರಾಗಿ ಆಲಿಸುತ್ತಿರುವಂತೆಯೇ ಹೊರ ನಡೆಯುತ್ತಾನೆ. ರಾವಣನು ಮಂಡೋದರಿಯನ್ನು 'ನಮ್ಮ ಬಗೆ ನಮಗೆ ಪಗೆ ಬೆದರದಿರ್' ಎಂದು ಸಂತೈಸಿ ಮಲಗಲೆಂದು ಕರೆದೊಯ್ಯುತ್ತಾನೆ.

ಮತ್ತೆ ಕಾಣುವುದು ತನ್ನ ಒಬ್ಬನೇ ಮಗನ ದುರವಸಾನದ ಸಿಡಿಲ ಬಿರುಬನ್ನು ತಾಳಲಾರದೆ ಜರ್ಝರಿತ ಜೀವಿಯಾದ ಮಂಡೋದರಿಯನ್ನು. ಅವಳ ದುಃಖವನ್ನು ಸಹಿಸಲಾಗದೆ 'ನಮ್ಮ ಸಂಕಟಗಳಿಗೆಲ್ಲ ಕಾರಣಳಾದ ಹೃದಯಶೂನ್ಯೆಯಾದ ಸೀತೆಯನ್ನು ತುಂಡರಿಸುತ್ತೇನೆ' ಎನ್ನುತ್ತಾನೆ ರಾವಣ. ಅದನ್ನು ಕೇಳಿದೊಡನೆಯೆ, ದುಃಖದಿಂದ ಮೂಕಳಾಗಿದ್ದ ಮಂಡೋದರಿ, ಅವನನ್ನು ಹಾಗೆ ಮಾಡದಿರೆಂದು ಕೈ ಮುಗಿದು ಬೇಡಿಕೊಳ್ಳುತ್ತಾಳೆ. ಅದನ್ನು ನೋಡಿ, ತಪ್ಪಾಯ್ತು. ಅವಳನ್ನು ಕೊಲ್ಲುವುದಿಲ್ಲ, ಕ್ಷಮಿಸು ಎಂದು ರಾವಣ ಹೇಳುತ್ತಾನೆ. ಹೀಗೆ ಹೇಳಿದ ಪತಿಗೆ ಅತಿ ಕೃತಜ್ಞತೆಯನ್ನು ಅರ್ಪಿಸುವ ತೆರದಲ್ಲಿ ಮಂಡೋದರಿ ಅವನ ಚರಣ ಧೂಳಿಯನ್ನು ತನ್ನ ಮುಡಿಗೆ ತಳಿದುಕೊಳ್ಳುತ್ತಾಳೆ. ತನ್ನ ಅಸದಳ ಶೋಕದ ಸಮಯದಲ್ಲೂ ಸಹ ಅವಳ ಧರ್ಮದೃಷ್ಟಿ ಮಸುಳುವುದಿಲ್ಲ: ಪ್ರತೀಕಾರಕ್ಕೆ ಎಳಸುವುದಿಲ್ಲ.

ತನ್ನ ಸಂಕಲ್ಪ ಸಿದ್ಧಿಗೆ ಮಹಾದುರ್ಗೆಯನ್ನು ಪೂಜಿಸುತ್ತಿದ್ದ ರಾವಣ ಅದ್ಭುತಸಮಾಧಿಯಲ್ಲಿ ಸ್ವಪ್ನಕ್ಕೊಳಗಾಗುತ್ತಾನೆ. ಆ ಸ್ವಪ್ನದಲ್ಲಿ ತಾನು ಕಂಡ ದೃಶ್ಯಗಳಿಂದ ತಳಮಳಿಸಿ, ಹೊಸತಾಗಿ ಹುಟ್ಟಿದ ಹಸುಳೆಯಂತೆ ಅಳುತ್ತಿರಲು, ಮಂಡೋದರಿ ಉಪಚಾರವನ್ನು ನಡೆಸಿ ಜಾಗ್ರತ್ ಜಗಕ್ಕೆ ಕರೆತರುತ್ತಾಳೆ. 'ಮಂಡೋದರೀ, ಮಯಾತ್ಮಜೇ ಪ್ರಿಯೇ, ರಕ್ಷಿಸೆನ್ನನ್' ಎಂದು ಎಚ್ಚೆತ್ತವನನ್ನು ಹಾಳು ಕನಸಿಗೆ ಹೆದರದಿರೆಂದು ಸಂತವಿಡುತ್ತಾಳೆ. ಅವನೊರೆದ ಕನಸಿನ ವಿವರವನ್ನಾಲಿಸಿ 'ಸೀತೆಯುಲಿ ನಿನಗೀಗಳಿರ್ಪೊಂದು ಸಾತ್ತ್ವಿಕದ ಭಾವಶುದ್ಧಿಯ ದಿಟಂ ಪ್ರತಿಮೆಯಂ ಪಡೆದುದಾ ಸ್ವಪ್ನದೊಳ್' ಎಂದು ಸಂತೈಸುತ್ತಾಳೆ. ಅವಳ ನುಡಿಗಳಿಂದ ಶಾಂತನಾದ ರಾವಣ 'ದೇವಿ, ಪಾಪಿಯಂ ಕೈಬಿಡದೆ ಪುಣ್ಯಕೊಯ್ಯುವ ದೇವಿ, ನನಗೆ ನೀನೊರ್ವಳಿಯೆ ದಲ್' ಎಂದು ಪ್ರಶಂಸಿಸಲು, ಬಾಗಿ ನಮಿಸಿ ರಾವಣನ ಅಂತರಂಗದ ಆಸೆಯನ್ನಾಲಿಸಿ "ನಾಂ ಧನ್ಯೆ ದಲ್ ಬಾಳ್ ಸಾರ್ಥಕಂ, ಸಾವೊ ಬದುಕೊ ಇನ್ನೆನಗಿರದು ವ್ಯಥೆ' ಎಂದು ತೃಪ್ತಿಯನ್ನು ಸೂಚಿಸುತ್ತಾಳೆ. ಮಂಡೋದರಿಯ ವ್ರತ ಫಲಿಸುತ್ತದೆ. ರಾವಣನಿಗೆ ಹದಿಬದೆಯ ಹಿರಿಮೆಯು ಅರಿವಾಗುತ್ತದೆ. ನನ್ನ ಮಾಂಗಲ್ಯವನ್ನು ಪಣವಿಟ್ಟು ನಿನ್ನ ಹೃದಯವನ್ನು ಎಲ್ಲರಿಗೂ ತಿಳಿಯಪಡಿಸುತ್ತೇನೆ ಎಂದೂ, ರಾಮನರ್ಧಾಂಗಿಯನ್ನು ಕಪ್ಪವನ್ನಾಗಿ ಒಪ್ಪಿಸಿ, ಶ್ರೀರಾಮನಲ್ಲಿ ಕ್ಷಮೆ ಬೇಡುತ್ತೇನೆ ಎಂದೂ ಬೇಡುತ್ತಾಳೆ. ರಾವಣನು ಅದಕ್ಕೊಪ್ಪದೆ, ತಾನು ರಾಮನನ್ನು ಯುದ್ಧದಲ್ಲಿ ಸೆರೆಹಿಡಿದು ತರುವೆನೆಂದೂ, ನಂತರ ತಾವಿಬ್ಬರೂ ಹೋಗಿ, ಅವನನ್ನು ರಾವಣನನ್ನು ಗೆದ್ದ ಸೀತೆಗೆ ಕಪ್ಪವೊಪ್ಪಿಸೋಣವೆಂದೂ ಹೇಳಿ ಯುದ್ಧಕ್ಕೆ ತೆರಳುತ್ತಾನೆ.

ರಾಮನು ಬಿಟ್ಟ ಬ್ರಹ್ಮಾಸ್ತ್ರದಿಂದ ಗಾಯಪಡೆದು, ತನ್ನ ಎದೆಯಲ್ಲಿ ಹೊಕ್ಕ ಆ ರಾಮಬಾಣವನ್ನು ರಾಮನೆಂದೇ ಭ್ರಮಿಸಿ, ಲಂಕೆಗೆ ಹಿಂತಿರುಗುತ್ತಾನೆ ರಾವಣ. 'ಹಾ ಸ್ವಾಮಿ, ಪುಣ್ಯಸಂದುದೆ, ತೋರು ತೋರೆನಗೆ ಸೆರೆವಿಡಿದ ಮೈಥಿಲೀನಾಥನಂ' ಎಂದು ಅಳುತ್ತಾ ಪತಿಗೆ ಶೈತ್ಯೋಪಚಾರವೆಸಗುತ್ತಾಳೆ ಮಂಡೋದರಿ. ರಾವಣನು ಕಣ್ದೆರೆದು 'ನೀಂ ಪತಿವ್ರತೆಯುಪ್ಪೊಡೆ

(32ನೇ ಪುಟ ನೋಡಿ)

# ಹನುಮದ್ರಾಮಾಯಣ

ಕನ್ನಡ ಸಾಹಿತ್ಯ ಚರಿತ್ರೆಯನ್ನು ಅವಲೋಕಿಸಿದಾಗ ನೂರಾರು ಕವಿಗಳು ರಾಮಾಯಣ ಕಥಾನಕವನ್ನು ಕಾವ್ಯರೂಪವಾಗಿ ವಿರಚಿಸಿದ ವಿಷಯ ತಿಳಿದು ಬರುತ್ತದೆ. ಇವುಗಳಲ್ಲಿ ಜೈನರಾಮಾಯಣಗಳನ್ನು ಬಿಟ್ಟು, ಉಳಿದವುಗಳ ಕಥಾಭಾಗದಲ್ಲಿ, ಸಮನ್ವಯತೆ ಕಂಡುಬಂದರೂ, ಪ್ರತಿಭಾ ಸಂಪನ್ನರಾದ ಕವಿಗಳು, ತಮ್ಮ ಕೃತಿಗೊಂದು, ವಿನೂತನತೆಯನ್ನೀಯುವ ದೃಷ್ಟಿಯಿಂದ, ಕೆಲವೊಂದು ಸನ್ನಿವೇಶಗಳ ಬದಲಾವಣೆ, ಹಿನ್ನೆಲೆಯ ಕತೆಗಳು, ವ್ಯಕ್ತಿ ಚಿತ್ರಣವಿರೂಪಣೆ, ಇತ್ಯಾದಿಗಳಿಂದ ಕೌತುಕಗೊಳಿಸಿರುವರು. ಇಂತಹ ರಾಮಾಯಣಗಳಲ್ಲಿ ಕನ್ನಡದ ಹನುಮದ್ರಾಮಾಯಣವೂ ಒಂದಾಗಿದೆ. ಇದು ಕನ್ನಡ ಪಂಡಿತ ಮುನ್ನೂರು ಶಿವರಾಮಯ್ಯನವರಿಂದ ಪರಿಶೋಧಿಸಲ್ಪಟ್ಟು, ಕ್ರಿ. ಶ. 1913 ರಲ್ಲಿ ಉಡುಪಿಯಲ್ಲಿ ಮುದ್ರಣಗೊಂಡಿದೆ. ಮುಂದೆ ಇದು ಅಚ್ಚಾದದ್ದು ಕುರಿತು ತಿಳಿದು ಬಂದಿಲ್ಲ.

ಈ ರಾಮಾಯಣವನ್ನು ಬರೆದವನು ಸುಬ್ರಹ್ಮಣ್ಯ, ಅಥವಾ ಸುಬ್ಬನೆಂಬ ಕವಿ. ಕರ್ನಾಟಕ ಕವಿ ಚರಿತೆಯಲ್ಲಿ "ಇವನು ಬ್ರಾಹ್ಮಣಕವಿ. ಇವನ ತಂದೆ ವೆಂಕಾರ್ಯ, ಸ್ಥಳ ಅಡುವಳ್ಳಿ. ಕುಲದೇವತೆ ಮೂಕಾಂಬೆ, ಮೂಕಾಂಬಾ ಸಾರಗ ಪ್ರಸಾದ ಸಾಧಿತ, ಸರಸ ಸಾಹಿತ್ಯ ಸಾಮ್ರಾಜ್ಯ ಪ್ರತಿಷ್ಠಿತ, ವಿದ್ವಜ್ಜನೋಪ, ಲಾಲನೀಯ ಭೂವಿಭುದ" ಎಂದು ಇವನನ್ನು ಕುರಿತು ಬರೆದಿದೆ. ಇವನ ಕಾಲ ಸುಮಾರು, ಕ್ರಿ. ಶ 1750. ಈತನ ಕುರಿತಾದ ಕೆಲವು ಹೆಚ್ಚಿನ ವಿವರಗಳನ್ನು ಬೇರೆ ಮೂಲಗಳಿಂದಲೂ ಸಂಗ್ರಹಿಸಲೆಡೆಯಿದೆ. ಇವನಿಂದಲೇ ವಿರಚಿಸಲ್ಪಟ್ಟ ರುಕ್ಮಿಣೀಸ್ವಯಂವರ ಮತ್ತು ಪಾರಿಜಾತಗಳೆಂಬ ಎರಡು ಯಕ್ಷಗಾನ ಕೃತಿಗಳಿವೆ. ಅವುಗಳಲ್ಲಿ ತನ್ನ ಹಿರಿಯರ ಕುರಿತು ಹೇಳಿಕೊಂಡಿರುವನು. ರುಕ್ಮಿಣೀ ಸ್ವಯಂವರದಲ್ಲಿ—

ಧಾರಿಣಿಗೆ ಪಶ್ಚಿಮದಿ ಶೋಭಿಪ |
ವಾರಿ ನಿಧಿಯನ್ನಾಳ್ವ ಕೆಳದಿಯ |
ಭೂರಮಣ ಬಸವೇಂದ್ರನರಸ್ಥಿರಿಯ
ಸೇರಿಬಾಳ್ವ ||
ಕ್ಷಿತಿಯ ದಿವಿಜರ ಕುಲದೊಳುದಿಸಿದ |
ಮತಿವಿಶಾರದ ವೆಂಕಣಾರ್ಯನ |
ಸತಿಸುಗುಣೆ ದೇವಮ್ಮನೆಂಬಳತಿ
ಸುಶೀಲೆ ||
ನೆರೆಪ್ರೌಢ ಚನ್ನಯ್ಯನನುಜನು |
ತರಳ ಸುಬ್ಬನು ಶಿವನು ಸಾಕ್ಷಾತ್ |
ಕರುಣದಿಂ ನುಡಿಸಿದನು
ಶ್ರೀವರಜಾತವನ್ನೂ ||

ಎಂದು ಹೇಳುವಲ್ಲಿ ಈತನ ಹಿರಿಯರ ಬಗ್ಗೆ ತಿಳಿಯಲವಕಾಶವಿದೆ. ಪಾರಿಜಾತ ಪ್ರಸಂಗದ ಕೊನೆಯಲ್ಲೂ ಈ ಪ್ರಸ್ತಾಪಗಳಿವೆ. ಈತನ ತಂದೆ ವೆಂಕಣಾರ್ಯನು ಕೆಳದಿಯ ಅರಸರಲ್ಲಿಯೂ, ಮುಂದೆ ಮೈಸೂರಿನ ಹೈದರಾಲಿಯಲ್ಲಿಯೂ ಮಂತ್ರಿಯಾಗಿದ್ದನು. ವೆಂಕಣಾರ್ಯನೂ ಕವಿಯಾಗಿದ್ದು ವಾರ್ಧಕ ಪಟ್ಪದಿಯಲ್ಲಿ ಒಂದು ರಾಮಾಯಣವನ್ನು ಬರೆದಿರುವನು. ರಮಾಭ್ಯುದಯವೆಂಬ ಚಂಪುಕಾವ್ಯ ಕೂಡ ಇವನಿಂದ ಬರೆಯಲ್ಪಟ್ಟಿದೆ. ಶ್ರೀ ರಾಮಪುರೀ ಹಂಪೆಯಾಮಾತ್ಯ, ವಾಬಾಂಬೆಯರ ಮಗನೆಂದು ಕವಿಚರಿತ್ರೆಯಲ್ಲಿದೆ. ಹನುಮದ್ರಾಮಾಯಣದ ಆಧಾರದಿಂದ ಮೈರಾವಣ ಕಾಳಗವೆಂಬ ಯಕ್ಷಗಾನವನ್ನು ಬರೆದ ವೆಂಕಟನೆಂಬ ಕವಿಯು ತಾನು ಸುಬ್ಬ ಮತ್ತು ಲಕ್ಷ್ಮಿಯರ ಪುತ್ರನೆಂದಿರುವನು. ಇಷ್ಟು ವಿವರಗಳಿಂದ ನಾವು ಒಂದು ವಂಶಾವಳಿಯನ್ನು ಗುರುತಿಸಬಹುದು. ಹಂಪೆಯಾಮಾತ್ಯ ಮತ್ತು ವಾಬಾಂಬೆಯರ ಮಗ ವೆಂಕಣಾರ್ಯ. ಅವನ ಪತಿ ದೇವಮ್ಮ. ಇವರ ಮಕ್ಕಳು ಚೆನ್ನಯ್ಯ ಮತ್ತು ಸುಬ್ಬ. ಸುಬ್ಬನ ಹೆಂಡತಿ ಲಕ್ಷ್ಮಿ. ಇವರ ಮಗ ವೆಂಕಟ.

ಹನುಮದ್ರಾಮಾಯಣದಲ್ಲಿ 15 ಆಶ್ವಾಸಗಳಿದ್ದು, 2237 ಕಂದಪದ್ಯಗಳಿವೆ ಈ ರಾಮಾಯಣವನ್ನು ನೈಮಿಷಾರಣ್ಯದಲ್ಲಿ ವರ್ಣಿಸಲಾಗಿದೆ. ಪ್ರತಿ ಆಶ್ವಾಸದ ಪ್ರಾರಂಭದಲ್ಲಿ ಶ್ರೀರಾಮನ ಸ್ತುತಿಪರವಾದ ವೃತ್ತಗಳಿವೆ. ಅವರ ಜೊತೆಗೆ ಮುಖ್ಯಪ್ರಾಣ ಸ್ತುತಿಯ ಕಂದ ಪದ್ಯಗಳಿವೆ. ಕಾವ್ಯದಲ್ಲಿ ಕೊಲ್ಲೂರು ಮೂಕಾಂಬೆಯನ್ನು ನೆನೆದಿರುವನು. ಈ ಕೃತಿಯನ್ನು ಓದಿದಾಗ ಕೆಲವು ವಿಶಿಷ್ಟ ವಿಚಾರಗಳು ಗೋಚರಿಸುತ್ತವೆ. ರಾವಣನು ತನ್ನ ಮಿತ್ರ ಮೈರಾವಣನ ಮೂಲಕ ರಾಮಲಕ್ಷ್ಮಣರನ್ನು ಸೋಲಿಸಲು ಯತ್ನಿಸುವ ಕತೆ ಇದರಲ್ಲಿದೆ. ಇದು ಕೌಶಿಕರಾಮಾಯಣದಲ್ಲಿ, ಮತ್ತು ಮೈರಾವಣ ಕಾಳಗವೆಂಬ ಕನ್ನಡದ ಇನ್ನೊಂದು ಕೃತಿಯಲ್ಲಿದ್ದರೂ, ಯಕ್ಷಗಾನ ಮೈರಾವಣ ಕಾಳಗವು ಹನುಮದ್ರಾಮಾಯಣವನ್ನು ಆಶ್ರಯಿಸಿದೆ. ಮೈರಾವಣನನ್ನು ಹನುಮಂತನು ಕೊಂದು, ಜಯ ಪಡೆಯುವನು. ಹನುಮದ್ರಾಮಾಯಣದ ಕೆಲವು ಪದ್ಯಗಳು ಸೂತರು ಶೌನಕಾದ್ಯರಿಗೆ ಹೇಳಿದರೆಂದು ಅಕ್ಷರ ಮಾತ್ರ ವ್ಯತ್ಯಾಸದಿಂದ ಮೈರಾವಣ ಕಾಳಗದಲ್ಲೂ ಕಾಣಿಸಿಕೊಳ್ಳುತ್ತವೆ. ಹನುಮದ್ರಾಮಾಯಣದ—

ಆ ನರನಾಥನ ಸತಿಯಂ |
ದಾನವಪತಿ ಲಂಕೆಗುಯ್ದನೆಂಬುದ
ನರಿದುಂ ||
ಭಾನುಸುತಂಕೆಳೆಸಲ್ ಪವ |
ಮಾನಾತ್ಮಜನಂಬುರಾಶಿಯಂ
ನೆಗೆದಸಣಂ (12-59)

ಈ ಪದ್ಯವು ಪ್ರಸಂಗದಲ್ಲಿ:

ಆ ನರನಾಥನ ಸತಿಯನು ಲಂಕೆಗೆ|
ದಾನವ ಕದ್ದೊಯ್ಯೆ ||
ತಾನರಿತಾಗಲ್ ಭಾನುಸುತನು ಪವ |
ಮಾನಜನನು ಕಳುಹೆ || ೧ ||

**ಶ್ರೀ ಪು. ಶ್ರೀನಿವಾಸಭಟ್ಟ**

ಎಂದಾಗಿದೆ. ಇಂತಹ ಅನುಕರಣೆಗಳು ಇನ್ನೂ ಇವೆ. ಸೇತು ಬಂಧನದ ದಿನಗಳ ಸಂಖ್ಯೆ ಇದರಲ್ಲಿ ತೊರವೆ ರಾಮಾಯಣ ಕ್ಕಿಂತ ವಿಭಿನ್ನವಾಗಿದೆ. ತೊರವೆ ರಾಮಾಯಣ ದಲ್ಲಿ "ಪುಷ್ಯ ಶುದ್ಧದ ದಶಮಿಯಿಂದ ನಾಲ್ಕುದಿನ" ಎಂದರೆ ತ್ರಯೋದಶಿವರೆಗೆ ಸೇತು ಬಂಧನದ ಕಾರ್ಯ ನಡೆಯಿತೆಂದಿದೆ. ಇದರಲ್ಲಿ—

ಮುನಿಗಳಿರ ಚವುತಿಯೊಳ್ ಶುಭ ।
ಪ್ರಾರಂಭ ಗೈಯೆ (7–110)
ದಿನಮಯ್ದು ಕಾಯ್ತು ಶತಯೋಜನ
(7–112)

ಎಂದಿದ್ದು ಸೇತು ಬಂಧನಕ್ಕೆ ಐದು ದಿನ ಬೇಕಾಯಿತೆಂದಿದೆ. ಶ್ರೀ ರಾಮಚಂದ್ರನು ಲಂಕೆಯಿಂದ ಮರಳಿ ಬರುವಾಗ ಸಮುದ್ರ ತೀರದಲ್ಲಿ ಈಶ್ವರ ಲಿಂಗವನ್ನು ಪ್ರತಿಷ್ಠೆ ಮಾಡಿದನೆಂದು ರೂಢಿಯಲ್ಲಿ ಹಾಗೂ ಇತರ ರಾಮಾಯಣಗಳಲ್ಲಿ ಹೇಳಿದ್ದುಂಟು. ಇದರಲ್ಲಿ ಇದು ಬೇರೆ ರೀತಿಯಲ್ಲಿ ಉಲ್ಲೇಖಿತವಾಗಿದೆ. ಸೇತುಬಂಧನಕ್ಕೆ ಸಹಕಾರ ಕೊಡುವೆನೆಂದು ಸಮುದ್ರರಾಜನು ತೆರಳಿದ ಬಳಿಕ "ಸರಸಿಜ ನೇತ್ರಂ ಸಮುದ್ರ ತಟದೊಳ್ ರಾಮೇಶ್ವರ ನೆಂಬಭಿದಾನದೊಳಂ ವಿರಚಿಸಿ ಲಿಂಗ ಪ್ರತಿಷ್ಠೆಯ ಗೆಯ್ದು" ಎಂದಿದ್ದು ಸೇತು ಕಟ್ಟಲು ಪ್ರಾರಂಭಿಸುವ ಮೊದಲೇ ರಾಮೇಶ್ವರ ಕ್ಷೇತ್ರನಿರ್ಮಾಣ, ಶ್ರೀರಾಮ ಚಂದ್ರನಿಂದಾಯಿತು ಎಂದು ಶಿವಪಾರಮ್ಯ ವನ್ನು ಸಾರಲಾಗಿದೆ. ಅಲ್ಲದೆ ಶ್ರೀರಾಮ ಚಂದ್ರನಿಂದಲೇ ಕ್ಷೇತ್ರ ಯಾತ್ರೆಯ ಕ್ರಮ ವನ್ನು ಹೇಳಿಸಿರುವನು.

ವಾರಾಣಸಿಯಿಂದಂ ಭಾ ।
ಗೀರಥಿಯಂ ತಂದು
ಲಿಂಗಕಭಿಷೇಚನಮಂ ॥
ಆರುಂ ಮಾಡಲೊಡಂ ಘನ ।
ಘೋರ ಮಹಾಪಾಪಮಳಿಯೆ
ಸುಕೃತಿಗಳಪ್ಪರ್ (7–107)

ಇಲ್ಲಿ ಗಂಗಾವಾರಿಯನ್ನು ತಂದು ರಾಮೇಶ್ವರ ಲಿಂಗಕ್ಕೆ ಅಭಿಷೇಕ ಮಾಡಬೇಕೆಂದು ಮಾತ್ರ ಹೇಳಿದೆ. ಆದರೆ ರೂಢಿಯಲ್ಲಿ ರಾಮೇಶ್ವರದ ಮಳಲನ್ನು ಗಂಗೆಗೂ ಹಾಕಿದರೆ ಪುಣ್ಯಪ್ರದ ವೆಂದಿದೆ. ಈ ಸಂಗತಿ ಈಗಲೂ ಪ್ರಚಾರ ದಲ್ಲಿದೆ. ಈ ಉದ್ದೇಶಕ್ಕಾಗಿ ಯಾತ್ರೆ ಮಾಡುವ ಬ್ರಾಹ್ಮಣರ ಭೋಜನಕ್ಕೆ ದತ್ತಿ ಬಿಟ್ಟ ಶಾಸನವೊಂದು (ಕ್ರಿ. ಶ. 1415) ದ. ಕ. ಜಿಲ್ಲೆಯ ಚಿತ್ರಾಪುರ ದುರ್ಗಾಲಯ ದಲ್ಲಿದೆ. ಇದನ್ನು ಕವಿಯು ಶ್ರೀರಾಮ ನಿಂದಲೇ ಹೇಳಿಸಿ, ಅದರ ಮಹತ್ವವನ್ನು ಹೆಚ್ಚಿಸಿರುವನು.

ಕುಂಭಕರ್ಣನು ನಿದ್ದೆಯಲ್ಲಿದ್ದಾಗಲೆ ಸೀತಾಪಹರಣದ ಪ್ರಕರಣನಡೆಯಿತು. ಮುಂದೆ ಲಂಕೆಗೆ ಕಪಿಸೇನೆ ಬಂದಾಗ, ಅವ ನನ್ನು ಯುದ್ಧಕ್ಕಾಗಿ ಎಬ್ಬಿಸಲಾಯಿತು. ಅವನಿಗೆ ವಿಷಯ ತಿಳಿಸಿದಾಗ, ಎಲ್ಲವೂ ವಿಚಿತ್ರವಾಗಿ ಕಂಡಿತು ಎಂದು ಬೇರೆ ಕನ್ನಡ ರಾಮಾಯಣಗಳಲ್ಲಿದೆ. ಈ ಕಾವ್ಯದಲ್ಲಿ ಕುಂಭಕರ್ಣನು ಮೊದಲೊಮ್ಮೆ ಕಾಣಿಸಿ ಕೊಳ್ಳುವನು. ರಾಮನ ದಂಡುಬಂದ ವಾರ್ತೆಯರಿತ ರಾವಣನು, ಓಲಗದಲ್ಲಿ ಇದನ್ನು ಪ್ರಸ್ತಾಪಿಸಿ, ಸಭಾಸದರ ಅಭಿಪ್ರಾಯ ಕೇಳುವನು. ಆಗ ಕುಂಭ ಕರ್ಣನು

ಆಲಿಪುದಸುರಾಧಿಪ ಸೀ ।
ತಾ ಲಲನಾಮಣಿಯನ್ನೆದೆ ತಂದಾಗಳೆ ನಿ ।
ನ್ನಾಲಯದಯ್ಸಿರಿ ಕುಂದಿದು ।
ದಾಲೋಚಿಸಲೇತಕೆಂದು
ಮಗುಳ್ದಿಂತೆಂದಂ ॥ (7–37)

ಎಂದು ಹೇಳುವನು. ಮುಂದೆ ಯುದ್ಧಕ್ಕಾಗಿ ಎಬ್ಬಿಸಿದಾಗಲೂ ತಾನು ಪೂರ್ವದಲ್ಲಿ ಹೇಳಿದ ಮಾತು ಸರಿಯಾಯಿತೆನ್ನುವನು.

ಶ್ರೀರಾಮಚಂದ್ರನು ಸ್ವರ್ಣಮೃಗವನ್ನು ಹಿಡಿಯಲು ಹೋದಾಗ, ನಿಜಸೀತೆಯನ್ನು ಅಗ್ನಿದೇವನಲ್ಲಿರಿಸಿ, ಛಾಯಾ ಸೀತೆಯನ್ನು ದಳಭವನದಲ್ಲಿರಿಸಿದನೆಂಬ, ಪದ್ಮಾವತೀ ಕಲ್ಯಾಣದ ಹಿನ್ನೆಲೆಯಾಗಿ, ಬೇರೆ ಕಾವ್ಯ ಗಳಲ್ಲಿ ಹೇಳಿದ ಸಂಗತಿ, ಈ ಕಾವ್ಯದಲ್ಲಿ ಉಲ್ಲೇಖಿತವಾಗಿದೆ ಯುದ್ಧಾಂತ್ಯದಲ್ಲಿ ಸೀತೆಯ ಅಗ್ನಿಪರೀಕ್ಷೆ ನಡೆದಾಗ ನಿಜಸೀತೆ ಬರುವಳೆಂದಿದೆ. ಹನುಮಂತನು ವಾಯು ಪುತ್ರನೆಂದು ಸಾಮಾನ್ಯವಾಗಿ ಪ್ರಚಲಿತವಿದೆ ಯಾದರೂ, ಅವನನ್ನು ಪರಮೇಶ್ವರಾವತಾರ ಯೆಂದೂ ವರ್ಣಿಸುವುದಿದೆ. ಅದಕ್ಕೆ ಕೆಲವು ಸುಳಿವುಗಳು ಈ ಕಾವ್ಯದಲ್ಲಿ ಕಂಡು ಬರುತ್ತವೆ. ಉದಾಹರಣೆಗೆ ಈಶಾವತಾರ-ಮೆಂಬರ್ (1–6) ಧೂರ್ಜಟಿಯಂಶಭೂತ ನಾದ ಹನುಮ (2–2) ನೀನೆ ರುದ್ರವಂಶಿ ಭೂತಂ (2–41) ಈತಂ ಭೂತೇಶಾಂಶಿ ಭೂತಂ (4–57) ಇವನೇ ಶುದ್ಧಾತ್ಮನಲ್ತೆ ಹರನವತಾರಂ(4–68) ರುದ್ರಾಂಶಂ ಕುಡುಗೆ ನಿಜ್ಜಮಾನಂದಮಂ (5–2) ನೀನೆ ಕಪಿರೂಪಿ ನಾಂತೀಶನೆನಲಾ (13–141) ಎಂದು ಹನುಮ ನನ್ನು ಕುರಿತು ಹೇಳಲಾಗಿದೆ.

ಹನುಮಂತನು ದೇವೇಂದ್ರನಿಂದ ಸಾವಿರ ವೇದವನ್ನೋದಿದನೆಂದು, ವಿಭೀಷಣನು ಶೂರ್ಪನಖಿಯ ತಮ್ಮನೆಂದು, ಪುಷ್ಪಕ ವಿಮಾನವನ್ನು ಕುಬೇರನಿಗೆ ಮರಳಿಸಲಾಯಿ ತೆಂದೂ ಹೇಳುವ ಹಲವು ನೂತನ ವಿಷಯ ಗಳಿಂದ ಓದುಗರಿಗೆ ಕೌತುಕ ಬರಿಸುವ ಈ ಕಾವ್ಯದ ಪರಿಚಯಕ್ಕಾಗಿ ಕೆಲವು ಸಂಗತಿ ಗಳನ್ನು ಮಾತ್ರ ಇಲ್ಲಿ ಬರೆಯಲಾಗಿದೆ. ಅಧ್ಯಯನಾತ್ಮಕವಾಗಿ ಓದಿದಾಗ ಇನ್ನಷ್ಟು ರಸಾತ್ಮಕ ವಿಷಯಗಳು ಹೊರಹೊಮ್ಮ ಬಹುದು. ಇದು ಮುದ್ರಣವಾದ ಕಾಲದಲ್ಲಿ ಸಂಪಾದಕರಿಗೆ ತೀರಾ ಜೀರ್ಣವಾದ ತಾಳೆ ಗರಿಯ ಒಂದು ಪ್ರತಿಮಾತ್ರ ದೊರಕಿತ್ತು ಎಂದು ಹೇಳಲಾಗಿದೆ. ಕನ್ನಡನಾಡಿನ ಬೇರೆ, ಬೇರೆ ಭಾಗದಲ್ಲಿ ಇದರ ಪ್ರತಿಗಳೂ ಖಂಡಿತವಾಗಿ ಇದ್ದೀತು. ಕನ್ನಡ ಸಾಹಿತ್ಯಾಸಕ್ತರ ನೆರವಿನಿಂದ ಈ ಸುರಸ ಕಾವ್ಯ ಮತ್ತೊಮ್ಮೆ ಮುದ್ರಣಗೊಳ್ಳು ವಂತಾಗಲೆಂದು ಹಾರೈಸಲಾಗಿದೆ.

★



# ಶ್ರೀ ಯದುಶೈಲನಾಥ ಸುಪ್ರಭಾತ

ಸುಪ್ರಭಾತವು ಶ್ರೀ ಚೆಲುವನಾರಾಯಣನರಸಿ
ಶ್ರಿತಜನಪ್ರಿಯದಾನಶೀಲೆ, ಶ್ರೀರಂಗ
ನಾಯಕಿಯೆ, ಸುಪ್ರಭಾತವು ನಿನಗೆ ತಾಯೆ.
ಶ್ರೀ ಯದುಶೈಲನಾಥನರಸಿಯೆ, ಶ್ರೀ ಲಕ್ಷ್ಮೀನಾರಾಯಣಿಯೆ ವಾಗ್ದೇವಿ
1

ಸುಪ್ರಭಾತವು ವೇದಮಯಿ ಶಾರದೆಯೆ.
ಪ್ರಸನ್ನ ಮುಖಚಂದ್ರಮಂಡಲೇ
ಸುಪ್ರಭಾತನಮರ ವಂದಿತಳೆ ಸಿರಿದೇವಿ
ಶ್ರೀ ಯದುಶೈಲನಾಥನರಸಿಯೆ, ಶ್ರೀಲಕ್ಷ್ಮೀನಾರಾಯಣಿಯೆ ವಾಗ್ದೇವಿ
2

ಸುಪ್ರಭಾತವು ಆದಿನಾರಾಯಣೀ ಜಗದಂಬೆ
ಪದ್ಮಮುಖಿ ಪರಮಕಲ್ಯಾಣಿ ಪಾವನಚರಿತೆ
ದ್ವಾದಶಾತ್ಮ ಜ್ಯೋತಿರೂಪಿಯೆ ತಾಯೆ
ಶ್ರೀ ಯದುಶೈಲನಾಥನರಸಿಯೆ, ಶ್ರೀಲಕ್ಷ್ಮೀಶ್ವೇತಾಂಬರಳೆ ವಾಗ್ದೇವಿ 3

ಸುಪ್ರಭಾತವು ಪಿತಾತೆ ಮಾತೆಯುಭಮಾತೆ ಜಗನ್ಮಾತೆ
ಅನ್ನಪೂರ್ಣೇಶ್ವರಿಯೆ, ಜ್ಞಾನವೈರಾಗ್ಯ ಸಿದ್ಧಿ ದಾಯಕಿಯೆ
ಕಮಲಮುಖಿ ಕಮಲಾಕ್ಷಿ ಕಾರುಣ್ಯಮಯಿ ತಾಯೆ
ಶ್ರೀ ಯದುಶೈಲನಾಥನರಸಿಯೆ, ಶ್ರೀಲಕ್ಷ್ಮೀನಾದಮಯಿ ಶಾರದೆಯೆ 4

ಸುಪ್ರಭಾತವು ಶರಧಿಸುತೆ, ಸುರಾಗ್ರಗಣ್ಯೆ,
ವೇದವೇದಾಂತಮಯಿ, ಸುರವಾಣಿ ಸರಸ್ವತ್ಯೈ
ಪರಮಪಾವನಚರಣೆ ಕಾರುಣ್ಯಮಯಿ ತಾಯೆ
ಶ್ರೀ ಯದುಶೈಲನಾಥನರಸಿಯೆ, ಶ್ರೀಲಕ್ಷ್ಮೀ ಶ್ರೀಲಲಿತೆ ಆದಿನಾರಾಯಣಿ
5

ಶ್ರೀರಂಗರಂಗ ಕಸ್ತೂರಿರಂಗ
ಶೇಷ ಶಯನನೇ ಶ್ರೀಹರಿಯೆ
ಕರುಣಾಂತರಂಗ ಸುಪ್ರಭಾತವು ಶ್ರೀ ಲಕ್ಷ್ಮೀ
ಹೃತ್ಕಮಲವಾಸ ಯದುಶೈಲನಾಥ, ಶ್ರೀ ಚೆಲುವನಾರಾಯಣ 6

ಬಾಗಾರದಾರತಿ ಜ್ಯೋತಿ ತಾನಾಗಿ
ಬೆಳಗಿ ಮೂಡಿಹನು ಮೂಡಣದಿ
ಕನಕವರ್ಣನು ಕಡೆಮುಡಿಯ ಚಾಚಿಹನು
ಸುಪ್ರಭಾತವು ನಿನಗೆ ಯದುಶೈಲನಾಥ, ಶ್ರೀ ಚೆಲುವನಾರಾಯಣ 7

ಹೊಂಗಿರಣಬೊಳ್ಳಿಯೊಳ್ಮಿಂದು ಸಂತಸದಿ
ಸಡಗರದಿ ರಾಗಮಾಲಿಕೆಯುಲಿವ
ಕರೆಯುತಿಹುದೀ ವನಪಕ್ಷಿ ಸಂಕುಲವು
ಸುಪ್ರಭಾತವು ನಿನಗೆ ಯದುಶೈಲನಾಥ, ಶ್ರೀ ಚೆಲುವನಾರಾಯಣ 8

ಮುತ್ತುಮಾಣಿಕಮುಡಿಯುಟ್ಟು, ನಿನ್ನ
ಚರಣಕೆ ನಮಿಸಿ ಭೂದೇವಿ, ಕೂಗಿ
ಕರೆದಿಹಳಯ್ಯ ನವಿಲು ಕೋಗಿಲೆಯಾಗಿ,
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 9

ನಿನ್ನ ಕರುಣೆಯ ಪಾದಧೂಳಿಯ ಬಯಸಿ
ಕಾದಿಹುದು ಕಾತುರದಿ ಈರೇಳು ಲೋಕ
ಉದಯಗಾನವ ಹಾಡಿ ನಲಿದಿಹುದು ಸಂತಸದಿ,
ಸುಪ್ರಭಾತವು ನಿನಗೆ ಯದುಶೈಲನಾಥ, ಶ್ರೀ ಚೆಲುವನಾರಾಯಣ 10

ವೇದರಕ್ಷಕನೇ ಏಳು ಮತ್ಸ್ಯಾವತಾರನೇ
ವಾತ್ಸಲ್ಯವಾರಿಧಿಯೆ ಸಪ್ತಾದ್ರಿವಾಸ
ಮಮತೆಯಾ ಮೂರುತಿಯೆ ಹೇ ಶ್ರೀನಿವಾಸ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 11

ಸುರರಿಗಮೃತವಿತ್ತ ಮಂದರಗಿರಿಧಾರಿ
ಶ್ರೀರಮಣ ಕೂರ್ಮಾವತಾರಿ ಶ್ರೀರಂಗ
ಶ್ವೇತಪದ್ಮಧರ ಶೇಷಶಯನನೇ ಶ್ರೀರಂಗ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 12

ಭುವಿಯ ಶರಧಿಯಿಂದೆತ್ತಿ ಒಲವಿನಲಿ
ನೀಕಾಯೆ ವರಾಹ ರೂಪದಿ ತಂದೆ
ದಾನವಾಂತಕ ಶ್ರೀರಂಗರಂಗ ಜಗನ್ನಾಥ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 13

ಕಂದನೊಲವಿನ ಕರೆಗೆ ಓಗೊಡುತ
ಕಂಬದಲಿ ಬಿಂಬಿಸಿದ ವೀರನರಸಿಂಹ
ಭಕ್ತವತ್ಸಲ ಪ್ರಹ್ಲಾದವರದ ಶ್ರೀರಮಣ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 14

ಮೂರಡಿಯ ಯಾಚಿಸುತಲೈತಂದು
ಮೂಜಗವ ನೀನಳೆದ ವಾಮನನೆ
ಭಕ್ತರಾಧೀನ ಪರಮಪಾವನ ಚರಣ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 15

ಅಭಯಹಸ್ತದಿ ಸಲಹಿ ಸಾಧುಸಜ್ಜನರ
ಗರ್ವಿತರ ಸಂಹರಿಸುತ್ತೈತಂದ ಪರಶುಧಾರಿಯೆ
ಭಾರ್ಗವನೆ ಭಾಗವತೋತ್ತಮನೆ ಶ್ರೀ ಪರಶುರಾಮ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 16

**ಶ್ರೀ ಬಿ. ಎಸ್. ವೇಣುಗೋಪಾಲನ್**

ಕೌಸಲ್ಯಾಸುತನೇ ಏಳು ಭರತಾಗ್ರಜನೆ
ವಾತ್ಸಲ್ಯವಾರಿಧಿಯೆ, ರಘುರಾಮರಾಮ
ನೀಲಮೇಘಶ್ಯಾಮ ಶ್ರೀರಾಮ ಬೆಳಗಾಯಿತೇಳಯ್ಯ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 17

ವಿಶ್ವಾಮಿತ್ರ ಪ್ರಿಯಧನನೇ ಏಳು
ತಾಟಕಾದಿ ನಿಶಾಚರ ವಿನಾಶಕರನೇ
ಅಹಲ್ಯಾಶಾಪವಿಮೋಚನನೇ ಶ್ರೀರಾಮ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 18

ಧರಣಿಜಾರಮಣ, ಭಾರ್ಗವರಾಮನಾ
ದರ್ಪಾಪಹರಣ, ಲೋಕೈಕರಾಮ, ಜಯತು
ಜಯ ಶ್ರೀರಾಮರಾಮ ರಘುವಂಶಲಲಾಮ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 19

ಪಿತೃವಾಕ್ಯಪರಿಪಾಲಕನೇ, ಅನುಪಮ
ಗುಣಾಂಬುಧಿಯೆ, ಶಬರಿಯಾತಿಥ್ಯ
ಸ್ವೀಕೃತನೇ ಭಕ್ತಬಾಂಧವ ಶ್ರೀರಾಮ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 20

ಸುಗ್ರೀವ ಸಖನೇ ಏಳು ಅಂಜನಾಸುತ
ಹೃದಯಧಾಮ, ಶ್ರೀರಾಮರಾಮ ಜಯರಾಮ
ನಯನ ಮನೋಹರರಾಮ ಸುಗುಣಾಭಿರಾಮ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 21

ಸೌಮಿತ್ರಿಯಗ್ರಜನೇ ಏಳು ದೋರ್ದಂಡ
ಕೋದಂಡಪಾಣಿ, ರಾವಣಾಸುರ ಮರ್ಧನ
ದನುಜವಿರಾಮ ಶ್ರೀರಾಮ ಕೋದಂಡರಾಮ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 22

ಪವಮಾನ ನಂದನಾನಂದ, ಸೀತಾ
ಮನೋಲ್ಲಾಸ, ಮಂದಸ್ಮಿತವದನ
ನೀಲಮೇಘಶ್ಯಾಮ ತಾರಕರಾಮ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 23

ವಿಭೀಷಣ ವರದ ಪರಮಪಾವನ ಚರಣ
ದಶರಥಾತ್ಮಜ ರಾಮ ಅನಂತಗುಣಧಾಮ
ರಘುರಾಮ ಶ್ರೀರಾಮ ಸುಗುಣಾಭಿರಾಮ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 24

ನಂದನಂದನನೇ ಗೋಪಾಲ, ಪೂತನೀಕಾಳಿಂಗ
ಮರ್ಧನನೆ, ಬೃಂದಾವನಾನಂದ ವನಮಾಲಿ
ಬಾಲಗೋಪಾಲ ಲೀಲಾವತಾರಿ ಶ್ರೀಕೃಷ್ಣ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 25

ಮಣ್ಣು ತಿಂದಿಹನಮ್ಮ ಎಂದಣ್ಣನೆಂದಾಗ
ಮಾತೆಗೊಲವಿಂದ ಬಾಯಲ್ಲಿ ಬ್ರಹ್ಮಾಂಡ ನೀ
ತೋರಿ, ಮಾತೆಮಡಿಲಲಿ ನಲಿದ ಗೋವಿಂದ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 26

ರಾಧಾಮನೋವಿಹಾರಿ ಗೋವರ್ಧನೋದ್ಧಾರಿ
ರಾಸಲೀಲಾ ಕೇಳಿ ವೇಣುನಾದವಿಲೋಲ
ಶ್ರೀವೇಣುಗೋಪಾಲ ಶ್ರೀ ತುಳಸಿ ವನಮಾಲಿ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 27

ಸುಪ್ರಭಾತವನು ಹಾಡಿ ಸುರರು ಶಾದಿಕರು
ಕೆನೆಹಾಲು ಮೊಸರುಬೆಣ್ಣೆಯ ತಂದು
ಸ್ವೀಕರಿಸು ಬಾತಂದೆ ಸಾತ್ವತ ಕುಲತಿಲಕ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 28

ನಂದಯಶೋದಾಕಂದ, ಅರವಿಂದ
ದಳಾಯತಾಕ್ಷ, ಕೌಸ್ತುಭಾಭರಣ
ಕಂಸಚಾಣೂರ ಮರ್ಧನನೆ ಶ್ರೀಕೃಷ್ಣ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 29

ವಸುದೇವ ದೇವಕೀ ಪರಮಾನಂದ
ಶಿಶುಪಾಲ ದಂತವಕ್ರ ದರ್ಪಾಪಹಾರ
ಯದುಕುಲೋತ್ತುಂಗ ಶೃಂಗ ಶಿಖರಾಭರಣ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 30

ದ್ರೌಪದಿಯ ಮೊರೆಕೇಳಿ ಕಾಯ್ದ ಗೋವಿಂದ
ಗೋವಿಂದ ಎಂದೊಡನೆ ಬಂದೋಡಿ ಕಾಯ್ದವನೆ
ಪಾಂಡವಪ್ರಿಯ ಪಾರ್ಥಸಾರಥಿಯೆ ಶ್ರೀ ಕೃಷ್ಣ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 31

ಏಳು ಏಳಯ್ಯ ರುಕ್ಮಿಣೀರಮಣ ಶ್ರೀಕಾಂತ
ಸುಧಾಮಹೃತ್ಕಮಲನಿವಾಸ ಶ್ರೀಕೃಷ್ಣ
ಏಳು ಏಳಯ್ಯ ಯದುಕುಲಾನ್ವಯ ರತ್ನದೀಪ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 32

ಸತ್ಯಭಾಮಾಪ್ರಿಯನೆ ಶ್ರೀಕೃಷ್ಣ ಶೃಂಗಾರಶೀಲ
ಮಾಧವನೆ, ವೃಷ್ಣಿವಂಶಪ್ರದೀಪ, ಶ್ರೀ ಕೃಷ್ಣ
ಬೃಂದಾವನಾನಂದ ಗೋವಿಂದ ಗೋಪಾಲ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 33

ಹಸ್ತಿನಾವತಿಯೊಳತಿ ಪ್ರೀತಿಯಲಿ ನೀನಡೆದೆ
ವಿದುರನಾಲಯಕೆ ಭಕ್ತಬಾಂಧವನೆ ಶ್ರೀಕೃಷ್ಣ
ಪರಮಪಾವನ ಚರಣ ದೀನಜನಮಂದಾರ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 34

ಒಲವಿನಿಂದಿತ್ತ ಹಾಲಿನಿಂ ಹುಸಿಹಸಿವ ನೀಗಳೆದೆ
ಕರುಣೆಯಾ ಹೊಳೆಹರಿಸಿ ನೀನೊಲಿದೆ ವಿದುರಂಗೆ
ತಿಳಿಯದಾದರು ನಿನ್ನಾದಿಯನು ವೇದವೇದಾಂತಕೋವಿದರು
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 35

ಯುಗಯುಗದಿ ನೀಬಂದೆ ಪರಿಪರಿಯ ರೂಪಿನಲಿ
ಧರ್ಮ ರಕ್ಷಕನೇ ಏಳು ವಿಶ್ವರೂಪನೆ ಶ್ರೀಕೃಷ್ಣ
ಪಾಂಡವರೊಡೆಯ ಪಾರ್ಥಸಾರಥಿಯೆ ಗೀತಗೋವಿಂದ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 36

ಏಳುಏಳಯ್ಯ ಕಸ್ತೂರೀ ತಿಲಕಾನಂದ
ಏಳಯ್ಯ ಶ್ರೀತುಳಸಿ ವನಮಾಲೀ
ನಾರದಾದಿ ಸುರವಂದಿತನೆ ಶ್ರೀರಂಗರಂಗ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 37

ಅಖಿಲಾಂಡಕೋಟಿ ಬ್ರಹ್ಮಾಂಡ ನಾಯಕನೆ
ವಟಪತ್ರಶಾಯಿ ವೇದವೇದಾತೀತ
ಕಲ್ಕಿಯೋ ಶ್ರೀರಂಗ ಸಾತ್ವತ ಕುಲರತ್ನ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 38

ಕರಿರಾಜ ವರದನೇ ಏಳು ಏಳಯ್ಯ ಗರುಡ
ಗಮನನೇ ದೇವಾದಿದೇವ ಕೋಟಿ ತಾಪಾಪಹರಣ
ಶ್ರೀರಮಣ ಶ್ರೀರಂಗ ಶ್ರಿತಜನಪಾಲ ಗೋಪಾಲ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 39

ತಿರುಶೆಲ್ವಪಾರಿನಲು ನಲಿದೋಡಿ ನೀಬಂದೆ
ಯತಿರಾಜವರದಾಂಕಿತನೆ ಪರಮಪಾವನ ಮೂರ್ತಿ
ಶ್ರೀರಂಗರಂಗ ತಿರುಶೆಲ್ವನಾರಾಯಣನೆ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 40

ಪರಿಪರಿಯ ಪರಿಮಳದಿ ಮಂದಾನಿಲಬಂದ
ಹಾಡಿಹರು ಬೀಬಿನಾಂಚಾರು ಕಾವೇರಿ,ಗೋದೆಯರು
ಸುಪ್ರಭಾತವು ನಿನಗೆ ಮಂಗಳಾಂಗ ಶ್ರೀರಂಗರಂಗ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 41

ಏಳುಏಳಯ್ಯ ಪುಂಡರೀಕಾಕ್ಷನೇ ಏಳು
ಕಮನೀಯ ಗುಣಾತ್ಮ ಕೌಸ್ತುಭಾಭರಣ
ಏಳಯ್ಯ ಪಾಲ್ಗಡಲ ಶಯನ ತಿರುಶೆಲ್ವನಾರಾಯಣ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 42

ಕನಕನಾದಿಕೇಶವನೇ ಏಳು, ಪುರಂದರನವಿಠಲನೆ
ತ್ಯಾಗರಾಜಾರ್ಚಿತಾನಂದ ಶ್ರೀರಾಮ ರಘುರಾಮ
ಕುಮಾರವ್ಯಾಸಗೊಲಿದವನೆ ವೀರನಾರಾಯಣನೆ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 43

ತಂದು ಮಲ್ಲಿಜಾಜಿಯಮಾಲೆ ಶ್ರೀ ತುಳಸಿಚೆಂದದಲಿ
ಸುತರು ಕಾದಿಹರಯ್ಯ ಕೃಷ್ಣನಿಗರ್ಪಿತವೆಂದು
ಶ್ರೀರಮಣ ಶ್ರೀಕಾಂತ ಚಕ್ರವರ್ತಿಯೆ ರಘುನಂದನನೆ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 44

ಬಾಳಲರಿಯದೆ ಬಳಲಿ ನೊಂದುಬಂದೆನು ಸ್ವಾಮಿ
ಕರುಣೆಯಲಿ ಸಲಹೆನ್ನ ಜಗದಾದಿಗುರುವೇ
ಪನ್ನಗಶಯನ ಪರಮಕಾರುಣ್ಯಚರಣ ಶ್ರೀರಮಣ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 45

ವ್ರತನಿಯಮಗಳರಿಯದೆನ್ನಪರಾಧಗಳನು
ಕ್ಷಮಿಸಿ ಕೈಹಿಡಿದು ನಡೆಸುಬಾ ಕರುಣಾಳು
ಬಾ ಬೆಳಕ, ಕಾರುಣ್ಯ ರಸಸಿಂಧು ಶ್ರೀರಂಗ ರಂಗ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 46

ನಿನ್ನ ಪಾದಕಮಲಗಳೆಮ್ಮ ಶಿರದಮೇಲಿರಲಿ
ನಿನ್ನಭಯ ಹಸ್ತವೆಮ್ಮ ಕಾಪಾಡುತಿರಲಿ
ನಿನ್ನ ಸ್ಮರಣೆಯೊಳನವರತ ನಡೆವಂತೆ ಸಲಹಯ್ಯ
ಸುಪ್ರಭಾತವು ನಿನಗೆ ಯದುಶೈಲನಾಥ ಶ್ರೀ ಚೆಲುವನಾರಾಯಣ 47

ಜಯತುಜಯ ಶ್ರೀರಂಗರಂಗ
ಜಯತುಜಯ ಗೋಪಾಲ ಗೋವಿಂದ
ಜಯತುಜಯ ತಿರುಶೆಲ್ವನಾರಾಯಣ
ಜಯತುಜಯ ಜಗನ್ನಾಥ ಶ್ರೀ ಯದುಶೈಲನಾಥ 48

ಮಂಗಳವು ಯದುಕುಲಾನ್ವಯರತ್ನದೀಪ
ಮಂಗಳವು ರಾಧಾರುಕ್ಮಿಣೀಸತ್ಯಭಾಮಾರಮಣ
ಮಂಗಳವು ಜಯಮಂಗಳವು ಸಾತ್ವತಕುಲರತ್ನ
ಶ್ರೀ ವೇಣುಗೋಪಾಲನಿಗೆ ನಿತ್ಯಜಯಮಂಗಳ 49



## ತಿರುಮಲೆ ತಿರುಪತಿ ದೇವಸ್ಥಾನಗಳು

# ತಿರುಮಲೆಯಲ್ಲಿ ವಸತಿಗಾಗಿ ದಾನಯೋಜನೆ

ಕಲಿಯುಗ ವೈಕುಂಠವೆಂದು ಹೆಸರಾದ ತಿರುಮಲೆ ಶ್ರೀ ವೆಂಕಟೇಶ್ವರನ ಆವಾಸಸ್ಥಳ. ಇಲ್ಲಿಗೆ ಸಹಸ್ರಾರು ಮಂದಿ ಯಾತ್ರಿಕರು ಪ್ರತಿದಿನವೂ ಬರುತ್ತಾರೆ. ಅನುದಿನವೂ ಹೆಚ್ಚುತ್ತಿರುವ ಯಾತ್ರಿಕರ ವಸತಿ ಸೌಕರ್ಯಗಳಿಗಾಗಿ ತಿ. ತಿ. ದೇ. ಗಳು ದಾನಯೋಜನೆಯಲ್ಲಿ ಕಾಟೇಜುಗಳು, ಸತ್ರಗಳು, ಅತಿಥಿಗೃಹಗಳನ್ನು ನಿರ್ಮಿಸುತ್ತಿದೆ. ವಿವಿಧ ಯೋಜನೆಗಳ ವಿವರಗಳು ಈ ರೀತಿ ಇವೆ.

### ರಾಮಬಗೀಚಾ ಅತಿಥಿಗೃಹ

ಈ ಅತಿಥಿಗೃಹವನ್ನು ದೇವಾಲಯದ ಈಶಾನ್ಯ ಭಾಗದಲ್ಲಿ ನಿರ್ಮಿಸಲಾಗುವುದು.

* ಇದು ಪ್ರತಿಯೊಂದರಲ್ಲೂ 50 ಸೂಟ್‌ಗಳಿರುವ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಸೂಟ್ 14'×18' ಗಳದ್ದಾಗಿ, ಸುಮಾರು 600 ಚದರಡಿ ಪ್ಲಿಂತ್ ಏರಿಯಾದಲ್ಲಿ ಸಾಮಾನ್ಯ ಅಂಗಳವನ್ನು ಹೊಂದಿರುತ್ತದೆ.
* ದಾನಿಗಳು ಒಂದು ಸೂಟ್ ನಿರ್ಮಾಣಕ್ಕೆ ರೂ 60,000 ನೀಡಬೇಕಾಗುವುದು.

### ಸಪ್ತಗಿರಿ ಧರ್ಮಶಾಲೆ

8.5 ಕೋಟಿ ರೂಗಳ ವೆಚ್ಚದ ಈ ಭಾರೀ ಯೋಜನೆಯನ್ನು ಸಪ್ತಗಿರಿ ಸತ್ರಗಳ ನಿರ್ಮಾಣಕ್ಕಾಗಿ ತಿ.ತಿ.ದೇ. ಕೈಗೊಂಡಿದೆ. ಪ್ರತಿ ಸೂಟ್‌ನ ನಿರ್ಮಾಣ ವೆಚ್ಚ 80000 ರೂಗಳು

ದಾನಿಗಳು 40,000 ರೂಗಳನ್ನು ತಮ್ಮ ಹೆಸರಿನ ಒಂದು ಸೂಟ್‌ಗಾಗಿ ನೀಡಬೇಕಾಗುವುದು.

ಎ. ಟಿ. ಸಿ. ಕಾಟೇಜುಗಳು ಹಾಗೂ ಎಂ. ಬಿ. ಸಿ. ಕಾಟೇಜುಗಳಲ್ಲಿನ ಮೇಲಂತಸ್ತು ಕೋಣೆಗಳಿಗೂ ಇದೇ ರೀತಿ ದಾನಗಳನ್ನು ನೀಡಬಹುದು.

### ದಾನಿಗಳಿಗೆ ಪ್ರತಿಫಲ

* ದಾನಿಗಳಿಗೆ ತಮ್ಮ ದಾನದ ಪ್ರತಿಯಾಗಿ ವರ್ಷಕ್ಕೆ 60 ದಿನಗಳ ಕಾಲ ತಿರುಮಲೆಯಲ್ಲಿ ಉಚಿತ ವಸತಿ ದೊರೆಯುವುದು.
* ಕಂಪನಿಗಳಿಗೂ, ಸಂಸ್ಥೆಗಳಿಗೂ ಈ ಸೌಲಭ್ಯ 15 ವರ್ಷಕ್ಕೆ ಮಾತ್ರ ಸೀಮಿತ
* ದಾನಿಗಳ ಬಂಧುಗಳಿಗೆ ವಸತಿ ನೀಡುವಲ್ಲಿ ಆದ್ಯತೆ, ನೀಡಲಾಗುವುದು.
* ಪ್ರತಿ ಕಾಟೇಜು/ಸೂಟ್ ನ ಹೊರಗೆ ದಾನಿಗಳ ಹೆಸರನ್ನು ಕೆತ್ತಿಡಲಾಗುವುದು.

ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಯವರ ಹೆಸರಿನಲ್ಲಿ ತೆಗೆದ ಡಿ.ಡಿ. ಯನ್ನು ತಿರುಮಲೆಯ ಎಕ್ಸಿಕ್ಯೂಟಿವ್ ಇಂಜನಿಯರ್–V ಇವರಿಗೆ ಕಳುಹಿಸಿ.

**ತುಸು ಧನವನ್ನು ವಿನಿಯೋಗಿಸಿ, ಪುಣ್ಯಫಲವನ್ನು ಪಡೆಯಿರಿ**

ಮಿಕ್ಕವಿವರಗಳನ್ನು ಪಡೆಯಬಹುದಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ**
**ತಿ.ತಿ. ದೇವಸ್ಥಾನಗಳು**
**ತಿರುಪತಿ–೫೧೭೫೦೧ ಆಂಧ್ರಪ್ರದೇಶ.**

**ಕಾರ್ಯನಿರ್ವಹಣಾಧಿಕಾರಿ**

# ಶ್ರೀರಾಮಾಯಣ

ಇತಿಹಾಸ ಶ್ರೇಷ್ಠವಾದ ಶ್ರೀರಾಮಾಯಣ ಎಂಬುದು ವಿಶಾಲವಾದ ಸಮುದ್ರಕ್ಕಿಂತಲೂ ಸುತ್ತಳತೆಯಲ್ಲೂ ಆಳದಲ್ಲೂ ಮೀರಿದ್ದು. ಇತಿಹಾಸವು ಶುದ್ಧವಾದ ಗಟ್ಟಿಚಿನ್ನ. ಇದನ್ನು ಮತಸ್ಥಾಪಕರೆಂಬ ಕುಶಲಕರ್ಮಿಗಳು ತಮ್ಮಗಳ ಮೂಸೆಯಲ್ಲಿ ಇಟ್ಟು ಕರಗಿಸಿ ತಮಗೆ ಅನುಕೂಲವಾದ ಆಭರಣಗಳನ್ನು ತಯಾರಿಸಿರುತ್ತಾರೆ. ಇಲ್ಲಿ ಕೆಲವರು ತಮ್ಮ ಸ್ವಂತಕ್ಕೆ ಮಾಡಿಸಿಕೊಂಡಿರುವ ಆಭರಣಗಳೇ ಜಾಸ್ತಿ. ಇದನ್ನು ದೇವರಿಗಾಗಿ ಆಭರಣವಾಗಿಸಿದವರು ಕೇವಲ ಕೆಲವರು. ಇವರುಗಳು ಕ್ರಮವಾಗಿ ಶ್ರೀಶಂಕರಾಚಾರ್ಯರು. ಶ್ರೀಆನಂದ ತೀರ್ಥರು ಮತ್ತು ಶ್ರೀರಾಮಾನುಜಾಚಾರ್ಯರು. ಮುಖ್ಯರು. ಶ್ರೀ ರಾಮಾನುಜಾಚಾರ್ಯರು ಎರಡು ಪಾದುಕೆಗಳನ್ನೂ ಮತ್ತು ಶಿರೋಭೂಷಣವನ್ನೂ ಮತ್ತು ಪರಮಾತ್ಮನ ಪರತತ್ತ್ವವನ್ನು ಪ್ರಜ್ವಲಿಸಲು "ವೈರಮುಡಿ"ಎಂಬ ಪರಮಾತ್ಮನಿಂದ ಬೇರ್ಪಡಿಸಲಾಗದ ಕಿರೀಟವನ್ನು ಮಾಡಿಸಿ ತಲೆಗೇರಿಸಿ ಕಂಡು ಪರವಶರಾದರು ಮತ್ತು ಕೃತಾರ್ಥರಾದರು.ಹೀಗೆ ಶ್ರೀರಾಮಾಯಣ ಎಂಬ ಇತಿಹಾಸ ಶ್ರೇಷ್ಠವಾದ ಶ್ರೀರಾಮಚರಿತ್ರೆಯನ್ನು ಅವರವರ ರುಚ್ಯನುಗುಣವಾಗಿ ವ್ಯಾಖ್ಯಾನಿಸಿರುವರು. ಪ್ರಸ್ತುತ ಶ್ರೀ ರಾಮಾನುಜ ಮತ ಸಂಪ್ರದಾಯವನ್ನು ಮಾತ್ರ ಸೂಕ್ಷ್ಮವಾಗಿ ವಿವರಿಸಲಾಗಿದೆ.

ವಾಲ್ಮೀಕಿ ಮಹರ್ಷಿಯು ಪೂರ್ವದಲ್ಲಿ ಅಂದರೆ ರಾಮಾಯಣ ಬರೆಯಲು ಮೊದಲು 'ಮಚ್ಛಂದಾದೇವ' ಎಂದರೆ ಮಿಥುನದಲ್ಲಿದ್ದ ಎರಡು ಪಕ್ಷಿಗಳನ್ನು ದುಷ್ಟಸ್ವಭಾವವುಳ್ಳ ಬೇಡನು ಬೇರ್ಪಡಿಸಲು, ಉಂಟಾದ ಮನಸ್ಸಿನ ಪರಿಣಾಮವಾಗಿ ಹೊರಟ ಶೋಕನಿಮಿತ್ತ ಶ್ಲೋಕಗಳು ಚತುರ್ಮುಖ ಬ್ರಹ್ಮನ ವರಪ್ರಸಾದದಿಂದ ಮಂಗಳ ಶ್ಲೋಕವಾಗಿ ಪರಿಣಮಿಸಿದವು. ಮೇಲಾಗಿ ಪೂರ್ಣ ಪರಿಪಾಠವನ್ನು ಬ್ರಹ್ಮನು ಸರಸ್ವತಿಯ ಮೂಲಕವಾಗಿ ಇವನಿಗೆ ಉಪದೇಶಮಾಡಿದ ಮೇಲೆ 2400 ಶೋಕಗಳನ್ನೊಳಗೊಂಡ ಆರು ಕಾಂಡ (ಭಾಗ) ಗಳನ್ನೊಳಗೊಂಡ "ಕಾವ್ಯಂ ರಾಮಾಯಣಂ ಕೃತ್ಸ್ನಂ ಸೀತಾಯಾಶ್ಚರಿತಂ ಮಹತ್" ಎಂದು ಪ್ರಾರಂಭಿಸಿ ಮುಕ್ತಾಯಗೊಳಿಸಿದನು. ಕಾವ್ಯವನ್ನು ಮುಕ್ತಾಯಗೊಳಿಸಿದಮೇಲೆ ಚಿಂತಾಕ್ರಾಂತನಾದನು–ಕಾರಣ ಇತಿಹಾಸದ ಅಸ್ತಿತ್ವವನ್ನು ಲೋಕಕ್ಕೆ ಪ್ರಚಾರಮಾಡುವುದು ಹೇಗೆ ಎಂದು. ಹೀಗೆ ಯೋಚನಾಕ್ರಾಂತನಾಗಿರಲು ರಾಮಚಂದ್ರನು ತನ್ನ ಪೂರ್ತಿ ಗರ್ಭಿಣಿಯಾದ ಪತ್ನಿಯು ದೋಷವಿಲ್ಲದೆ ಅಗಸನಮಾತಿನ ನಿಮಿತ್ತ ಮುಂದೆ ಮಾಡಿ ತನ್ನ ತಮ್ಮನ ಮೂಲಕ ವಾಲ್ಮೀಕಿ ಮಹರ್ಷಿಯ ಆಶ್ರಮಕ್ಕೆ ಕಳುಹಿಸುತ್ತಾನೆ. ಇಲ್ಲಿ ಕೋರಿಕೆಗೆ ತನ್ನ ಪತ್ನಿಯ ಬಯಕೆ ಎಂದೂ ಸಹಾ ಋಷಿ ತನ್ನ ಕಾವ್ಯದಲ್ಲಿ ಪ್ರಕಟಪಡಿಸುತ್ತಾನೆ. ವಾಲ್ಮೀಕಿ ಆಶ್ರಮದಲ್ಲಿ ಇಬ್ಬರು ಕುಮಾರರಿಗೆ ಸೀತೆಯು ಜನ್ಮವೀಯುತ್ತಾಳೆ. ಮಕ್ಕಳನ್ನು ಪಾಲಿಸಿ ನಾಮಕರಣ ಮಾಡುವ ಹೊಣೆ ಆಶ್ರಮವಾಸಿಯಾದ ಮತ್ತು ಅವತಾರವನ್ನು ಇತಿಹಾಸದ ಮೂಲಕ ಲೋಕೋದ್ಧಾರಕ್ಕಾಗಿ ರಚಿಸಿದ ವಾಲ್ಮೀಕಿ ಮಹರ್ಷಿಯ ಪಾಲಿಗೆ ಬರುತ್ತದೆ. ಇವರಿಗೆ ಕ್ರಮವಾಗಿ ಕುಶ ಲವ ಎಂಬ ನಾಮಾಂಕಿತವನ್ನು ಇಟ್ಟು, "ಆತ್ಮಾ ವೈ ಪುತ್ರನಾಮಾಸಿ" ಎಂಬ ವೇದಾಂತದ ಮರ್ಮವನ್ನು ಇವರುಗಳ ಮೂಲಕ ಸ್ವಯಂ ತಾನೇ ತಿಳಿಸಿಕೊಟ್ಟನು. ಇವರುಗಳಿಗೆ ತಾನು ರಚಿಸಿದ ಶ್ರೀರಾಮಾಯಣವನ್ನು ಸುಶ್ರಾವ್ಯವಾಗಿಯೂ, ಮಧುರವಾಗಿಯೂ, ಏಕಕಂಠವಾಗಿಯೂ ಹಾಡಲು ಬಾಯಿಪಾಠ ಮಾಡಿದನು. ಇದನ್ನು ಸದುಪಯೋಗ ಪಡಿಸಲು ಪಕ್ವವಾದ ಕಾಲ ನಿರೀಕ್ಷಣೆಯಲ್ಲಿದ್ದನು. ರಾಜಸೂಯಯಾಗವನ್ನು ಶ್ರೀರಾಮಚಂದ್ರನು ಮಾಡುವ ನಿಮಿತ್ತದಿಂದ ತನ್ನ ಚರಿತ್ರೆಯನ್ನು ತಾನೇ ಕೇಳಿಯೂ ಮತ್ತು ಲೋಕೋದ್ಧಾರಕ್ಕಾಗಿಯೂ ಶ್ರೀರಾಮಚಂದ್ರ ಮತ್ತು ಇತರ ಎಲ್ಲಾ ಋಷಿಗಳೂ, ರಾಜ್ಯದ ಎಲ್ಲಾ ಪ್ರಜೆಗಳ ಸಮ್ಮುಖದಲ್ಲಿ ಈ ಚಿರಂಜೀವಿಗಳ ಮೂಲಕ ಹಾಡಿಸಿ ಕೃತಾರ್ಥನಾದನು. ಪಾದ, ಲಯಬದ್ಧವಾದ ಮತ್ತು ಸುಶ್ರಾವ್ಯವೂ ಸುಮಧುರವೂ ಆದ ಕಾವ್ಯವನ್ನು ಕೇಳುತ್ತಾ ಕೇಳುತ್ತಾ ತಮ್ಮಗಳನ್ನೇ ಮರೆತು ಕುಣಿಯುತ್ತಾ "ಅದ್ಭುತ ಮಹದದ್ಭುತ" ವೆಂದು ವರ್ಣಿಸಿ ತಮಗೆ ಆಧಾರಭೂತವಾಗಿದ್ದ ಜಪಮಾಲೆ ಕಮಂಡಲ, ಕೃಷ್ಣಾಜಿನ, ಕೌಪೀನಾಂಬರ, ಮುಂತಾದುವುಗಳನ್ನು ಆಶೀರ್ವಚನ ಪೂರ್ವಕವಾಗಿ ಈ ಚಿರಂಜೀವಿಗಳಿಗೆ ಕೊಟ್ಟು ತಮ್ಮ ರಸಿಕತೆಯನ್ನು ಪ್ರಕಟಗೊಳಿಸಿದರು ಮುನಿಗಳು. ಆಗ ಶ್ರೀರಾಮಚಂದ್ರನೂ ಸಹಾ ಸಿಂಹಾಸನವನ್ನು ತ್ಯಜಿಸಿ ತನ್ನ ಚರಿತ್ರೆಯನ್ನು ಕೇಳಿ ಆನಂದಿಸುತ್ತಿರುವರಲ್ಲಿ ಒಬ್ಬನಾಗಿ, ತನ್ನ ಪುತ್ರರಿಂದ ಕೇಳುತ್ತಾನೆ. ಇದು ಇತಿಹಾಸ ಪ್ರಾರಂಭ.

ಅಯೋಧ್ಯೆ ಎಂಬ ನಗರವು ಸರಯೂನದಿಯ ತೀರದಲ್ಲಿರುವ ರಾಜ್ಯ. ಇದಕ್ಕೆ ಇಕ್ಷ್ವಾಕು ವಂಶದಲ್ಲಿ ಜನಿತನಾದ ಮತ್ತು ಸೂರ್ಯವಂಶ ಸಮುದ್ಭೂತನಾದ ದಶರಥನೆಂಬುವನು ಚಕ್ರವರ್ತಿ. ಅವನಿಗೆ ಕ್ರಮವಾಗಿ ಕೌಸಲ್ಯೆ, ಸುಮಿತ್ರೆ, ಕೈಕೇಯಿ ಎಂಬ ಪತ್ನಿಯರಿದ್ದರು ಈ ಚಕ್ರವರ್ತಿಯು ಅರವತ್ತು ಸಾವಿರ ವರುಷ ಧರ್ಮದಿಂದ ರಾಜ್ಯಪರಿಪಾಲನೆಯನ್ನು ಮಾಡುತ್ತಿದ್ದನು. ಇವನಿಗೆ ಕೊರತೆ ಪುತ್ರಸಂತಾನವೊಂದೇ. ಇದಕ್ಕಾಗಿ ಕುಲಗುರುಗಳ ಮತ್ತು ಹಿರಿಯರ ಸಮಾಲೋಚನೆಯಲ್ಲಿ ವ್ಯಕ್ತಪಟ್ಟಿತು ಪುತ್ರಕಾಮೇಷ್ಟಿಯಾಗ. ಕೂಡಲೇ ಪ್ರವೃತ್ತನಾದ ಚಕ್ರವರ್ತಿ, ತನ್ನ ಮಂತ್ರಿ ಮತ್ತು ಸಾಮಂತರ ಮೂಲಕ ಪುತ್ರಕಾಮೇಷ್ಟಿಯಾಗಕ್ಕೆ ಅನುವು. ಯಾಗದಲ್ಲಿ ಮುಖ್ಯರಾಗಿ ಆನ್ವಯಿಸಲು ಋಷ್ಯಶೃಂಗರಿಗೆ ಪ್ರಾರ್ಥನೆ. ಪ್ರಾರ್ಥನೆ ಮನ್ನಿಸಿ ಋಷ್ಯಶೃಂಗರೇ ಮುಂತಾದ ಅನೇಕ ಋಷಿಗಳಿಂದ ಯಾಗ ಪೂರ್ತಿ.

ಮೇಲೆ ದೇವಲೋಕದಲ್ಲಿ ವರಪ್ರಸಾದದಿಂದ ಮೆರೆಯುತ್ತಾ ವರನೀಡಿದವರನ್ನೇ ಹಿಂಸಿಸಲು ತೊಡಗಿದ ರಾವಣಾದಿಗಳ ಉಪಟಳಸಹಿಸಲಾರದೆ ಕ್ಷೀರಾಬ್ಧಿ ಶಾಯಿಯಲ್ಲಿ ಚತುರ್ಮುಖನೇ ಮುದಲಾದ ದೇವತೆಗಳಿಂದ ಪ್ರಾರ್ಥನೆ. ಪ್ರಾರ್ಥನೆಯನ್ನು ಮನ್ನಿಸಿ ಕಾಲನಿರೀಕ್ಷಣೆಯಲ್ಲಿರುವಾಗ ದಶರಥ ಚಕ್ರವರ್ತಿಯ ಪುತ್ರಕಾಮೇಷ್ಟಿ ಯಜ್ಞ ಪರಿಸಮಾಪ್ತಿ. ಭಗವಂತನಿಂದ ಅಂದರೆ ದೇವನಿರ್ಮಿತವಾದ ಪಾಯಸವನ್ನು ಯಕ್ಷ ರೂಪದಲ್ಲಿ ಹಿರಣ್ಯ ಪಾತ್ರದಲ್ಲಿ ಯಜ್ಞ ಕುಂಡದಿಂದ ಆವಿರ್ಭವಿಸಿ ಚಕ್ರವರ್ತಿಗೆ ನೀಡಿ ಅವನ ಪತ್ನಿಗಳಿಗೆ ಹಂಚಲು ಆದೇಶ. ಶಿರಸಾವಹಿಸಿದ ಚಕ್ರವರ್ತಿಯು ಪಾತ್ರೆಯ ಅರ್ಧಭಾಗವನ್ನು ಜ್ಯೇಷ್ಠ ಧರ್ಮಪತ್ನಿ ಕೌಸಲ್ಯೆಗೂ ಉಳಿದರ್ಧದಲ್ಲಿ ಎರಡು ಭಾಗ ಮಾಡಿ ಸುಮಿತ್ರೆ ಮತ್ತು ಕೈಕೇಯಿಗೂ ನೀಡಿ ಪುತ್ರಸಂತಾನೋತ್ಪತ್ತಿಯ ನಿರೀಕ್ಷಣೆಯಲ್ಲಿರುತ್ತಾನೆ. ಅವನ ಪತ್ನಿಯರೆಲ್ಲರೂ ಪೂರ್ಣವಾಗಿ ತಿಂಗಳುಗಳು ತುಂಬಿದ ಮೇಲೆ ಕ್ರಮವಾಗಿ ಕೌಸಲ್ಯೆಯಿಂದ ಶ್ರೀರಾಮಚಂದ್ರನೂ, ಸುಮಿತ್ರೆಯಲ್ಲಿ ಲಕ್ಷ್ಮಣ, ಶತ್ರುಘ್ನರೂ ಮತ್ತು ಕೈಕೇಯಿಯಿಂದ ಭರತನೂ ಜನಿಸಿದರು. ಚಕ್ರವರ್ತಿಯ ಆನಂದಕ್ಕೆ ಮೇರೆಯೇ ಇಲ್ಲದೆ ಮಕ್ಕಳನ್ನು ಹೊಂದಿ ಹದಿನಾರು ವರುಷಗಳು ತನ್ನ ಗತ ಕಾಲದ ಹತ್ತುಸಾವಿರ ವರುಷ

ಶ್ರೀ ಎಂ. ಶ್ರೀನಿವಾಸಯ್ಯಂಗಾರ್

ಗಳಲ್ಲಿ ಪಡೆದು ಅನುಭವಿಸದ ಸುಖವನ್ನು ಅನುಭವಿಸಿ ಸಂತೃಪ್ತಿಯಿದ್ದನು. ಮಕ್ಕಳು ಯೋಗ್ಯ ಮತ್ತು ಪ್ರಾಪ್ತ ವಯಸ್ಕರಾದುದನ್ನು ಕಂಡು ಪ್ರಾಪ್ತಕಾಲದಲ್ಲಿ ವಿವಾಹವನ್ನೇರ್ಪಡಿಸಲು ತನ್ನ ದೇಶದ ಜನರ ಮತ್ತು ಸಾಮಂತರ, ರಾಜ ಪುರೋಹಿತರಿಂದ ಒಳಗೊಂಡ ಮಂತ್ರಾಲೋಚನ ಸಭೆಯಲ್ಲಿರುವಾಗ ಬ್ರಹ್ಮರ್ಷಿಯಾದ ಶ್ರೀ ವಿಶ್ವಾಮಿತ್ರ ಋಷಿಯ ಆಗಮನವನ್ನು ದ್ವಾರಪಾಲಕರಿಂದ ಕೇಳಿ ಬಹಳವಾಗಿ ಸಂತೋಷಪಟ್ಟು ಋಷಿಯಿದ್ದಲ್ಲಿಗೆ ಸಕಲವಾದ ಗೌರವಗಳೊಡನೆ ಎದುರುಗೊಂಡು ಅರ್ಘ್ಯಪಾದ್ಯಾಚಮನೀಯಗಳನ್ನು ಶಾಸ್ತ್ರ ರೀತಿಯಲ್ಲಿ ಸಮರ್ಪಿಸಿ ಯೋಗಕ್ಷೇಮವನ್ನು ವಿಚಾರಿಸಿ, ಉಚಿತಾಸನದಲ್ಲಿ ಕೂಡಿಸಿ ತಾವುಗಳೆಲ್ಲರೂ ಅಂದರೆ ಅಯೋಧ್ಯಾನಗರಿಯಲ್ಲಿರುವವರೆಲ್ಲಾ ತಮ್ಮ ಆಗಮನದಿಂದ ಧನ್ಯರಾದೆವು, ತಮಗೆ ಇಷ್ಟ ಬಂದುದನ್ನು ಪ್ರಾರ್ಥಿಸಿ ನಮ್ಮಿಂದ ತಮ್ಮ ಇಷ್ಟಾರ್ಥ ಸಿದ್ಧಿಸುವುದು ಎಂದು ಹೇಳಿ ಋಷಿಯ ಇಂಗಿತಕ್ಕಾಗಿ ನಿರೀಕ್ಷಿಸುತ್ತಿದ್ದನು. ವಿಶ್ವಾಮಿತ್ರ ಋಷಿಯು 'ತಾನು ಮಾಡುತ್ತಿರುವ ಒಂದು ಇಷ್ಟಿಯಾಗಲ್ಲಿ ಕ್ರಮವಾಗಿ ಮಾರೀಚ ಮತ್ತು ಸುಬಾಹು ಎಂಬ ಇಬ್ಬರು ರಾಕ್ಷಸರುಗಳು ರಾವಣನಿಂದ ಪ್ರೇರಿತರಾಗಿ ಯಜ್ಞ ಪರಿಸಮಾಪ್ತಿಯಲ್ಲಿ ಮಾಂಸ ರಕ್ತಗಳನ್ನು ಯಜ್ಞಕುಂಡಕ್ಕೆ ಸುರಿದು ಯಜ್ಞ ಕಂಟಕರಾಗಿರುತ್ತಾರೆ. ಯಜ್ಞ ದೀಕ್ಷೆಯಲ್ಲಿರುವಾಗ ಶಾಪ ಕೊಡಲಾಗುವುದಿಲ್ಲ. ಆದ್ದರಿಂದ ಪುತ್ರರುಗಳಾದ ಶ್ರೀರಾಮಚಂದ್ರ ಮತ್ತು ಲಕ್ಷ್ಮಣರನ್ನು ತನ್ನ ಜೊತೆಯಲ್ಲಿ ಯಜ್ಞ ಪರಿಸಮಾಪ್ತಿಯವರೆವಿಗೂ ಕಳುಹಿಸಿಕೊಡಲು ಪ್ರಾರ್ಥಿಸಿದ. ಕೂಡಲೇ ಚಕ್ರವರ್ತಿ ಮೂರ್ಛಿತನಾಗಿ ಬಹಳವಾಗಿ ಶೋಕಪಟ್ಟು ಇನ್ನೂ ಹದಿನಾರು ವರುಷ ತುಂಬಿದ ಎಳೆಯ ಬಾಲಕರನ್ನು ರಾಕ್ಷಸರಿಗೆ ಬಲಿಕೊಡಲು, ಮನಬಾರದೆ ಹತ್ತು ಸಾವಿರ ವರುಷಬದುಕಿ ಪುತ್ರಕಾಮೇಷ್ಟಿ ಯಾಗದಿಂದ ಪಡೆದ ಮಕ್ಕಳನ್ನು ಕಳುಹಿಸಲಿಚ್ಚಿಸದೆ, "ನ ರಾಮ ನೇತು ಮರ್ಹಸಿ" ಎಂದು ತಾನೇ ಚತುರಂಗ ಬಲಸೇನೆಯೊಡಗೂಡಿ ಬಂದು ಆ ರಾಕ್ಷಸರೆಲ್ಲರನ್ನೂ ನಿಗ್ರಹಿಸುವುದಾಗಿ ಶೋಕಿಸುತ್ತಿರಲು ಬ್ರಹ್ಮರ್ಷಿಯಾದ ವಿಶ್ವಾಮಿತ್ರ ಋಷಿಯು ಮೊಟ್ಟಮೊದಲು "ಅಹಂ ವೇದ್ಮಿ ಮಹಾತ್ಮಾನಂ ರಾಮಂ ಸತ್ಯಪರಾಕ್ರಮಂ" ಎಂಬುದಾಗಿ ಅಲ್ಲಿ ನೆರೆದಿದ್ದ ಋಷಿಪುಂಗವರೂ ಉಚ್ಚರಿಸದ ಮತ್ತು ಚಕ್ರವರ್ತಿಯೇ ಮೊದಲಾದವರ ಚರ್ಮ ಚಕ್ಷುಗಳಿಗೆ ಅಗೋಚರನಾದ ಭಗವಂತನ ಮಹಿಮೆಯನ್ನು ಬಹಳವಿಧವಾಗಿ ವರ್ಣಿಸುತ್ತಾರೆ ನಮ್ಮ ಪೂರ್ವಾಚಾರ್ಯರುಗಳು. ಅಲ್ಲಿದ್ದ ವಶಿಷ್ಠನಿಂದ ಪ್ರೇರಿತನಾಗಿ ತನ್ನ ಇಬ್ಬರು ಮಕ್ಕಳನ್ನೂ ಕರೆದು ತಲೆಮುಸ್ನಾ ಘ್ರಾಣಿಸಿ ಮಂಗಳಾಶಾಸನ ಪೂರ್ವಕವಾಗಿ ಋಷಿಯ ಹಿಂದೆ ಹೋಗಿ ಅವನ ಆದೇಶ ಪಾಲಿಸಲು ನಿಯಮಿಸಿ ಬೀಳ್ಕೊಡುತ್ತಾನೆ. ವಿಶ್ವಾಮಿತ್ರ ಋಷಿಯು ಪಟ್ಟಣವನ್ನು ನಿರ್ಗಮಿಸಿ ಅರಣ್ಯಾಭಿಮುಖವಾಗಿ ನಿಶ್ಶಬ್ದವಾಗಿ ಹಿಂಬಾಲಿಸಿ ಬರುತ್ತಿದ್ದ ಈ ಇಬ್ಬರು ಬಾಲಕರನ್ನು ಹಿಂತಿರುಗಿ ನೋಡಿ ಬಹುವಾಗಿ ಪರಿತಪಿಸಿ ಅರಮನೆಯಲ್ಲಿ ಸುಖ ಭೋಗದಲ್ಲಿ ಕಂಗೊಳಿಸಿದ ಬಾಲಕರನ್ನು ಈ ರೀತಿಯಲ್ಲಿ ಕಷ್ಟಪಡಿಸಿದೆನಲ್ಲಾ ಎಂದು ಹಿಂದೆಯೇ ಅವರುಗಳಿಗೆ ಹಸಿವು, ನೀರಡಿಕೆ, ನಿದ್ರೆಗಳಿಂದ ತೊಂದರೆಯಾಗದಂತಹ ಬಲ ಮತ್ತು ಅತಿಬಲ ಎಂಬ ಶಕ್ತಿ ಮಂತ್ರವನ್ನುಪದೇಶಿಸಿ ಸಾಯಂಕಾಲದಲ್ಲಿ ಒಂದು ಪ್ರಶಸ್ತವಾದ ಸ್ಥಳವನ್ನು ಆರಿಸಿ ಆ ಇಬ್ಬರು ಸುಕುಮಾರರೊಡನೆ ಮಲಗಿ ಆ ರಾತ್ರಿಯನ್ನು ಕಳೆಯುತ್ತಾನೆ. ಉಷಃಕಾಲದಲ್ಲಿ ತನ್ನ ಈ ಎರಡು ಪಾರ್ಶ್ವದಲ್ಲಿರುವ ಪರಾತ್ಪರವಸ್ತುವನ್ನು ನೋಡಿ ಆನಂದಿಸಿ ತನಗಿಂತ ಈ ಪ್ರಪಂಚದಲ್ಲಿ ಈ ಯೋಗವನ್ನನುಭವಿಸುವನು ಯಾರೂ ಇಲ್ಲ ಎಂದು ಆ ಪರತತ್ತ್ವವನ್ನು ಆರಾಧನಾ ಪೂರ್ವಕವಾಗಿ ಪೂಜೆ ಮಾಡುತ್ತಾನೆ. ಹೇಗೆಂದರೆ "ಕೌಸಲ್ಯಾ ಸುಪ್ರಜಾ ರಾಮ ಪೂರ್ವಾ ಸಂಧ್ಯಾ ಪ್ರವರ್ತತೇ । ಉತ್ತಿಷ್ಠ ನರಶಾರ್ದೂಲ ಕರ್ತವ್ಯಂ ದೈವಮಾಹ್ನಿಕಂ" ಎಂಬ ತನ್ನ ಬ್ರಹ್ಮತ್ತ್ವ ವಿಶಿಷ್ಟವಾದ ಪರತತ್ತ್ವದ ಪೂಜೆಯನ್ನು ಮೊಟ್ಟಮೊದಲು ಮತ್ತು ತಾನೇ ಕೈಕೊಂಡು ಇತರರಿಗೆ ಮಾರ್ಗದರ್ಶನ ಕೈದೀವಿಗೆಯಾಗಿ ನಡೆಯುತ್ತಾನೆ. ಯಜ್ಞಕ್ಕಾಗಿ ಆಶ್ರಮ ಪ್ರವೇಶ ಮತ್ತು ಸುಬಾಹುವಿನ ವಧೆ ಮತ್ತು ಮಾರೀಚನ ಓಡಿಹೋಗುವಿಕೆಯಿಂದ ಯಜ್ಞ ಪರಿಸಮಾಪ್ತಿ. ಪರಿಸಮಾಪ್ತಿಯಿಂದ ಸಂತುಷ್ಟನಾದ ಋಷಿಯಿಂದ ಮುಂದಿನ ಗುರಿಯ ಯೋಚನೆ. ಅದೆಂದರೆ ಮಿಥಿಲಾನಗರದಲ್ಲಿ ವಿವಾಹಕ್ಕಾಗಿ ತೆರಳುತ್ತಿದ್ದವರ ಜೊತೆಯಲ್ಲಿ ಈ ಇಬ್ಬರೊಂದೊಡಗೂಡಿ ಮಿಥಿಲಾನಗರಾಭಿಮುಖವಾಗಿ ಪ್ರಯಾಣ. ಮಾರ್ಗ ಮಧ್ಯದಲ್ಲಿ ದೇವತಾಂತರನಾದ ಇಂದ್ರನಿಂದ ವಂಚಿತರಾದ ಮತ್ತು ಬೇರ್ಪಡಿಸಲ್ಪಟ್ಟ ಗೌತಮ ಅಹಲ್ಯೆಯರನ್ನು ತನ್ನ ಪರತ್ವದಿಂದ ಒಂದು ಗೂಡಿಸಿ ಆಶೀರ್ವಚನ ಪಡೆದು ಮಿಥಿಲೆಗೆ ಆಗಮನ. ಅಲ್ಲಿ ಶತಾನಂದನಿಂದ ಸ್ವಾಗತ ಮತ್ತು ವಿಶ್ವಾಮಿತ್ರ ಮತ್ತು ವಶಿಷ್ಠರ ಕಥೆ. ಆ ಮೂಲಾಗ್ರವಾಗಿ ಬ್ರಹ್ಮರ್ಷಿಯ ಪಟ್ಟದ ವರೆಗೆ ಶತಾನಂದರಿಂದ ವಿವರಣೆ. ಮೂರನೆಯ ದಿನ ಕನ್ಯಾಶುಲ್ಕವಾಗಿದ್ದ ಶಿವಧನುರ್ಭಂಗ, ವಿಶ್ವಾಮಿತ್ರನಿಂದ ನಿರ್ದೇಶಿತನಾದ ಶ್ರೀರಾಮಚಂದ್ರನಿಂದ ಸಂತೋಷದ ಪರಮಾವಧಿಯನ್ನು ಹೊಂದಿದ ಜನಕರಾಜನಿಂದ ಪ್ರೇರಿತರಾದ ದೂತರುಗಳ ಮೂಲಕ ದಶರಥ ಚಕ್ರವರ್ತಿಗೆ ವಿವಾಹಕ್ಕೆ ಬರಲು ಆಮಂತ್ರಣ. ಆಮಂತ್ರಣವನ್ನು

(22ನೇ ಪುಟ ನೋಡಿ)

## ಸರ್ವೋದ್ಧರಣ ಮಹಾಜಪಯಜ್ಞ

ಪವಿತ್ರಾತ್ಮ ಸ್ವರೂಪರೆ!

ಶ್ರೀ ಬದರೀನಾಥ ಪುಣ್ಯಕ್ಷೇತ್ರದಲ್ಲಿ ಶ್ರೀ ಸೂರ್ಯನಾರಾಯಣ ಬ್ರಹ್ಮಚಾರಿಯವರು ದೈವ ಪ್ರೇರಿತರಾಗಿ, ಭಕ್ತರಿಂದ ಮಂತ್ರಜಪಗಳನ್ನು ಮಾಡಿಸಿ ಅಯೋಧ್ಯಾ ಮಧುರಾ ಮಾಯಾ (ಹರಿದ್ವಾರ) ಕಾಶೀ, ಕಾಂಚಿ, ಅವಂತಿ (ಉಜ್ಜಯಿನಿ) ದ್ವಾರಕ– ಸಪ್ತಕ್ಷೇತ್ರಗಳಲ್ಲಿ ಸಮರ್ಪಣೆ ಮಾಡಿ ಪೂಜೆ ಮಾಡಲು ಸಂಕಲ್ಪಿಸಿದರು.

1. ಓಂ ನಮೋ ನಾರಾಯಣಾಯ, 2. ಓಂ ನಮಶ್ಶಿವಾಯ, 3. ಓಂ ನಮೋ ಭಗವತೇ ವಾಸುದೇವಾಯ, 4. ಓಂ ಶ್ರೀ ಲಲಿತಾದೇವ್ಯೈ ನಮಃ, 5. ಓಂ ಶ್ರೀ ರಾಮ ಜಯ ರಾಮ ಜಯ ಜಯ ರಾಮ, 6. ಶ್ರೀ ರಾಮ ರಾಮ ರಾಮ.

–ಮೇಲಿನ ಮಂತ್ರಗಳಲ್ಲಿ ಇಷ್ಟವಾದದ್ದನ್ನು ಜಪಿಸಿ, ಜಪಸಂಖ್ಯೆಯನ್ನು ಮಾಲೆಗಳಲ್ಲಿ (108 ಮಣಿಗಳು–1 ಮಾಲೆ) ತಿಳಿಸಬೇಕು.

1987 ರ ನವಂಬರ್‌ನಲ್ಲಿ ಒಂದೊಂದು ಪುಣ್ಯಕ್ಷೇತ್ರದಲ್ಲೂ (ಸಪ್ತಕ್ಷೇತ್ರಗಳಲ್ಲಿ) ಕಾಣಿಕೆ ಕಳುಹಿಸಿದವರ ಹೆಸರಿನಲ್ಲಿ ಪೂಜೆಗಳು, ಹೋಮಾದಿಗಳು (108 ಕುಂಡಗಳು) (108×7=756) ಜಪಗಳನ್ನು ನಡೆಸಲಾಗುವುದು.

ಅಳಿಲು ಸೇವೆ ರೂ 116/– ಕ್ಕಿಂತ ಹೆಚ್ಚಿಗೆ, ಚಂದ್ರನಿಗೊಂದು ಸೂತ್ರ ಸೇವೆ ರೂ 58/– ಕ್ಕಿಂತ ಹೆಚ್ಚಿಗೆ, ಯಜ್ಞ ರೂ 116/– ಕ್ಕಿಂತ ಹೆಚ್ಚಿಗೆ, ಸಪ್ತ ಪುರ ಯಜ್ಞ ರೂ 516/– ಕ್ಕಿಂತ ಹೆಚ್ಚಿಗೆ. ಒಂದು ಹೊತ್ತು ಅನ್ನ ಸೇವೆ 1116/– ಕ್ಕಿಂತ ಹೆಚ್ಚಿಗೆ, ವಿಶೇಷಸೇವೆ ರೂ 2516/– ಕ್ಕಿಂತ ಹೆಚ್ಚಿಗೆ. ಇದಕ್ಕಿಂತ ಹೆಚ್ಚಿನದನ್ನೂ ಭಕ್ತರು ನೀಡಬಹುದು. 116 ರೂಗಳಿಗಿಂತ ಹೆಚ್ಚಿಗೆ ನೀಡಿದವರಿಗೆ ಪ್ರಸಾದವನ್ನು ಕಳುಹಿಸಲಾಗುವುದು.

ಜಪಸಂಖ್ಯೆ, ಕಾಣಿಕೆ, ಮನಿಯಾರ್ಡರು, ಡಿ. ಡಿ. ಗಳನ್ನು ಕೆಳಕಂಡ ವಿಳಾಸಕ್ಕೆ 2–10–1987 ರೊಳಗೆ ಸೇರುವಂತೆ ಕಳುಹಿಸಬೇಕು.

ಸೂರ್ಯನಾರಾಯಣ ಬ್ರಹ್ಮಚಾರಿ,
C/o ಗೀತಾಪ್ರಚಾರ ಮಂಡಳಿ, 55, ನಾರಾಯಣ ಪಿಳ್ಳೆ ಬೀದಿ,
ಬೆಂಗಳೂರು – 560001.



# ಶ್ರೀರಾಮ - ತತ್ತ್ವಚಿಂತನ

ವೈದೇಹೀ ಸಹಿತಂ ಸುರದ್ರುಮತಲೇ
ಹೈಮೇ ಮಹಾ ಮಂಟಪೇ ।
ಮಧ್ಯೇಪುಷ್ಪಕ ಮಾಸನೇ ಮಣಿಮಯೇ
ವೀರಾಸನೇ ಸುಸ್ಥಿತಂ ॥
ಅಗ್ರೇ ವಾಚಯತಿ ಪ್ರಭಂಜನಸುತೇ
ತತ್ತ್ವಂ ಮುನಿಭ್ಯಃ ಪರಮ್ ।
ವ್ಯಾಖ್ಯಾಂತಂ ಭರತಾದಿಭಿಃ ಪರಿವೃತಂ
ರಾಮಂ ಭಜೇ ಶ್ಯಾಮಲಂ ॥

ಮಹರ್ಷಿ ಮೌನಿ ತಾಪಸಪ್ರಶಸ್ತ ಸಭ್ಯವೃಂದದೊಳ್ ।
ಮಹೀಸುತಾ ಸಮನ್ವಿತಂ ಸಹೋದರ ಪ್ರಪೂಜಿತಂ ॥
ರಹಸ್ಯ ನೈಗಮಂಗಳಂ ಸಮೀರಸೂನು ವಾಚಿಸಲ್ ।
ಮಹಾತತ್ತ್ವಮಂ ಗುರು ಪ್ರಸಾದಿಪಂ ರಘೂತ್ತಮಂ ॥

(ಡಾ॥ ಡಿ. ವಿ. ಜಿ. ಅವರ ಕೇತಕೀವನದಿಂದ.)



ತತ್ತ್ವ ಚಿಂತನೆಯ ಶ್ರೀರಾಮ ಸೀತಾ ಲಕ್ಷ್ಮಣ ಆಂಜನೇಯರ ಈ ವಿಗ್ರಹಗಳು ಕೋಲಾರಜಿಲ್ಲೆಯ ದೇವರ ಮಳ್ಳೂರಿನ ಶ್ರೀರಾಮ ದೇವಾಲಯದ್ದು. ಪುರಾತನವಾದ ಈ ದೇವಾಲಯ ಐತಿಹಾಸಿಕ ಧಾರ್ಮಿಕ ಪ್ರಾಮುಖ್ಯತೆಯನ್ನು ಪಡೆದದ್ದು ಎನ್ನಲು ಶಾಸನಾಧಾರಗಳೂ ಇವೆ.



ಚಿತ್ರ: 'ನಂದಿನಿ'

# ತಿರುಪ್ಪಾವೈ

ಓಙ್ಗಿ ಉಲಗಳಂದ ಉತ್ತಮನ್ ಪೇರ್ ಪಾಡಿ
ನಾಙ್ಗಳ್ ನಂಬಾವೈಕ್ಕುಚ್ಚಾತ್ತಿ ನೀರಾಡಿನಾಲ್
ತೀಙ್ಗಿನ್ರಿ ನಾಡೆಲ್ಲಾಂ ತಿಂಗಳ್ ಮುಮ್ಮಾರಿ ಪೇಯ್ದು
ಓಙ್ಗು ಪೆರುಞ್ಚೆನ್ನೆಲ್ ಊಡು ಕಯಲುಗಳ
ಪೂಙ್ಗುವಳೈ ಪೋದಿಲ್ ಪೊರಿವಂಡು ಕಣ್‌ಪಡುಪ್ಪ
ತೇಙ್ಗಾದೇ ಪುಕ್ಕಿರುಂದು ಶೀರ್ತ್ತಮುಲೈಪತ್ತಿ
ವಾಙ್ಗಕ್ಕುಡಂ ನಿರೈಕ್ಕುಂ ವಳ್ಳಲ್ ಪೆರುಂ ಪಶುಕ್ಕಳ್
ನೀಙ್ಗಾದ ಶೆಲ್ವಂ ನಿರೈಂದೇಲೋರೆಂಬಾವೈ

ಬಳೆದು ಬಳೆದು ಇಳೆಯನಳೆದ ಪರಮನವನ ಹೆಸರಹಾಡಿ
ಕೊಳೆಯ ತೊಳೆಯೆ ನೀರಲಿಳಿದು ಮಿಂದು ಬಂದು ವ್ರತವ ಮಾಡೆ
ಕಳೆದು ಕಷ್ಟ ಮೂರುಬಾರಿ ತಿಂಗಳಲ್ಲಿ ಮಳೆಯು ಬಹುದು
ಬೆಳೆಗೆ ಹಸಿರ ತುಂಬಿಕೊಟ್ಟು ಮೀನು ಜಲದೆ ಹಾರಿ ನಲಿಯೆ
ಹೊಳೆವ ಕೆಂಪು ಹೂವಿನಲ್ಲಿ ತುಂಬಿ ಬಂಡನುಂಡು ಮಲಗೆ
ಕುಳಿತುಕೊಂಡು ಹಸುವ ತುಂಬುಗೆಚ್ಚಲನ್ನು ಕರೆಯುತಿರಲು
ಕೊಳಗ ಪಾತ್ರೆ ತುಂಬಿ ಹರಿಯೆ ದಿವ್ಯವಾದ ದೇವಧೇನು
ಅಳಿಕೆ ಮೀರಿ ಸಿರಿಯ ನೀಡೆ ಅವನ ನೆನೆದು ನೋಂಪಿಗೈವ



ಆಳಿಮಳೈಕ್ಕಣ್ಣಾ ! ಒನ್ರು ನೀಕೈಕರವೇಲ್
ಆಳಿಯುಳ್ಪುಕ್ಕು ಮುಕುಂದಾರ್ತೇರಿ
ಊಳಿ ಮುದಲ್ವನುರುವಂಬೋಲ್ ಮೆಯ್‌ಕರುತ್ತು
ಪಾಳಿಯಂದೋಳುಡೈ ಪ್ಪರ್ಪನಾಬನ್ ಕೈಯಿಲ್
ಆಳಿಪೋಲ್ ಮಿನ್ನಿ ವಲಂಬುರಿಪೋಲ್ ನಿನ್ರದಿರಿಂದು
ತಾಳಾದೇ ಶಾರ್ಙ್ಗಮುದೈತ್ತ ಶರಮಳೈಪ್ಪೋಲ್
ವಾಳಲ ಪುಲಕಿನಿಲ್ ಪೆಯ್‌ದಿಡಾಯ್ ನಾಂಗಳುಂ
ಮಾರ್ಗಳಿ ನೀರಾಡ ಮಗಿಳ್‌ಂದಲೋರೆಂಬಾವಾಯ್

ಮಳೆಯ ಮಹಾದೇವ ನೀನು ದಯವ ಮಾಡಿ ಅನುಗ್ರಹಿಸು
ಜಲಧಿ ಹೊಕ್ಕು ನೀರ ಹೀರಿ ಗುಡುಗಬೀರಿ ಮೇಲಕೇರಿ
ಇಳೆಯ ಮೊದಲ ಪುರುಷ ನೀಲದೇಹದಂತೆ ಕಪ್ಪಗಾಗಿ
ಇಳಿದು ಜಾನು ಸೇರ್ವಕಯ್ಯ ಪದ್ಮಗರ್ಭ ಕರದಚಕ್ರ
ಹೊಳೆಯುವಂತೆ ಮಿಂಚ ಹರಿಸಿ ಪಾಂಚಜನ್ಯದೋಲು ಗುಡುಗಿ
ತಳುವಗೊಳದೆ ಶಾರ್ಙ್ಗ ಮುಕ್ತ ಬಾಣವರ್ಷದಂತೆ ಸುರಿವ
ಮಳೆಯ ಹರಿಸಿ ಇಳೆಯ ತಣಿಸು, ನಾವು ಕೂಡಿ ಮೀಹ ಮಾಡಿ
ಮಾರ್ಗಶೀರ್ಷ ಮಾಸದಲ್ಲಿ ಅವನ ನೆನೆದು ನೋಂಪಿಗೈವ



## ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

(18ನೇ ಪುಟದಿಂದ)

ಸಂಭ್ರಮದಿಂದ ಕೊಂಡಾಡಿ ದಶರಥ ಚಕ್ರವರ್ತಿ ಪರಿವಾರ ಸಮೇತನಾಗಿ ಮಿಥಿಲಾನಗರ ಆಗಮನ. ಅಲ್ಲಿ ಸೂರ್ಯ ವಂಶರಾದ ದಶರಥ ಚಕ್ರವರ್ತಿಯ ವಂಶವಿವರಣೆ ಮತ್ತು ಚಂದ್ರ ವಂಶ ಸಮುದ್ಭೂತನಾದ ಮಿಥಿಲಾಧಿಪತಿಯಾದ ಜನಕರಾಜನ ವಂಶ ವಿವರಣೆ. ವಿವಾಹ. ಕ್ರಮವಾಗಿ ನಾಲ್ಕು ಜನ ಪುತ್ರರಿಗೂ ವಿವಾಹ. ನಂತರ ತನ್ನ ಬ್ರಹ್ಮತ್ವದ ಸಾರ್ಥಕ್ಯತೆಯನ್ನು ಪಡೆದು ನಿರ್ಗಮಿಸುವ ಬ್ರಹ್ಮರ್ಷಿ ವಿಶ್ವಾಮಿತ್ರಋಷಿ. ಅಯೋಧ್ಯಾಭಿಮುಖವಾಗಿ ಪ್ರಯಾಣ ಬೆಳೆಸುವಾಗ ಮಾರ್ಗಮಧ್ಯದಲ್ಲಿ ಪರುಶುರಾಮನಿಂದ ವಿಷ್ಣು ಧನುಸ್ಸಿನ ಆಗ್ರಹಣ ಮತ್ತು ಪರಶುರಾಮಾವತಾರದ ಪರಿಸಮಾಪ್ತಿ. ಅಯೋಧ್ಯಾಗಮನ. ಯುವರಾಜ್ಯ ಪಟ್ಟಾಭಿಷೇಕಕ್ಕಾಗಿ ಮಂತ್ರಾಲೋಚನೆ. ಪೌರರಿಂದ ಕ್ಷಿಪ್ರದಲ್ಲೆ ವಿಳಂಬಿಸದೆ ಕಾರ್ಯಗೊಳಿಸಲು ಆಗ್ರಹ–ಇವೆಲ್ಲವೂ ಒಂದು ಭಾಗ.

ಇಲ್ಲಿ ಮುಖ್ಯವಾಗಿ ತೋರುವುದು ವೇದಾಂತ ದೃಷ್ಟಿಯಿಂದ ಈ ಕೆಳ ಕಂಡ ಅಂಶಗಳು–ವೇದದ ನಿರಂತರ ಅಭ್ಯಾಸ ಕೇವಲ ಪ್ರಣವವನ್ನು ಕೈವಶ ಪಡಿಸಿ ಕೊಳ್ಳುವುದು, ಇದನ್ನು ತನ್ನ ಕೃಪಾವಿಶಿಷ್ಟವಾದ ಮತ್ತು ವೇದಾಂತವನ್ನು ತನ್ನ ಎಲ್ಲಾ ಕೃತಿಗಳಲ್ಲೂ ನಡೆಸಿಕೊಟ್ಟಿರುವ ಅವತಾರದ ಮೂಲಕ ಕಾಣಬಹುದು. ಇದನ್ನು ಕಾಣಲು ಮುಖ್ಯವಾಗಿ ಅಂತಃಚಕ್ಷುಗಳು ಬೇಕಾಗಿರುವುವು. ಮೇಲಾಗಿ ಕಂಡದ್ದನ್ನು ನಿರಂತರ ಅನುಭವದಲ್ಲಿ ಕಾಣಲು ಕಾರಣರಾಗುವ ಆಚಾರ್ಯರುಗಳು ಬಹಳ ಮುಖ್ಯ. ಇಲ್ಲಿ ಅಂದರೆ ಇತಿಹಾಸ ಶ್ರೇಷ್ಠವಾದ ರಾಮಾಯಣದಲ್ಲಿ ಮೊದಲುಭಾಗವನ್ನು ವೇದಾಂತದ ದೃಷ್ಟಿಯಲ್ಲಿ ಸಮನ್ವಯ ಮಾಡಿದರೆ ಮೊಟ್ಟ ಮೊದಲು ಗೋಚರವಾಗುವುದು ಪ್ರಣವದ ಪೂರ್ವಭಾಗ. ಬ್ರಹ್ಮೋಪದೇಶವೆಂಬ ವೇದೋಕ್ತ ಕರ್ಮವು ಬೀಜ ಸಂಸ್ಕರಣೆ ಎಂದು ತೋರುತ್ತದೆ. ಎರಡನೆಯದಾದ ವೇದೋಕ್ತವಾದ ಕರ್ಮಗಾರ್ಹಪತ್ಯ. ಇದರ ಮುಖ್ಯ ಉದ್ದೇಶ್ಯ ಈ ಲೀಲಾ ವಿಭೂತಿಯಲ್ಲಿ ವೇದಾಂತದ ದೃಷ್ಟಿಯಿಂದ ಜೀವಾತ್ಮ ಪರಮಾತ್ಮರುಗಳ ಸಂಶ್ಲೇಷಮೇ ಪ್ರಣವಕ್ಕೆ ವೇದಾಂತದಲ್ಲಿ ಮೂರು ಅಕ್ಷರಗಳ ಸಮಾಗಮದಿಂದ ಪರಿಪೂರ್ಣತೆಯು ಹೊಂದುವಂತೆ, ಅಂದರೆ, ಅಕಾರ, ಉಕಾರ ಮತ್ತು ಮಕಾರಗಳ ಸಮ್ಮಿಳಿತಗಳಿಂದ 'ಓಂ' ಎಂಬ ಪ್ರಣವ ಏರ್ಪಡುತ್ತದೆ. ಹಾಗೆ ಇತಿಹಾಸ ಶ್ರೇಷ್ಠವಾದ ರಾಮಾಯಣದಲ್ಲಿ ವೇದಾಂತ ಪ್ರಕ್ರಿಯೆಯನ್ನು ಭಗವಂತನು ತಾನೇ ನಿರಾಬಾಧವಾಗಿ ಅವತಾರದಲ್ಲಿ ಪ್ರಣವದ ರಹಸ್ಯವನ್ನು ವಿಶದೀಕರಿಸಿರುತ್ತಾನೆ. ಈ ಭಾಗವನ್ನು ವಾಲ್ಮೀಕಿ ಮಹರ್ಷಿಯು ತನ್ನ ಕಾವ್ಯದಲ್ಲಿ 'ಕಾವ್ಯಂ ರಾಮಾಯಣಂ ಕೃತ್ಸ್ನಂ ಸೀತಾಯಾಶ್ಚರಿತಮಹತ' ಎಂದು ಎರಡು ಭಾಗವನ್ನಾಗಿಸಿ ಅದರಲ್ಲಿ ಅಡಗಿರುವುದನ್ನು 'ರಹಸ್ಯಂಚ' ಎಂದೂ ನಿಗೂಢವನ್ನು ಎತ್ತಿ ತೋರಿಸಿದ್ದಾನೆ.

ಅಕಾರ ವಾಚ್ಯನಾದ ಶ್ರೀರಾಮಚಂದ್ರನ ಪರಿಪೂರ್ಣತೆಗೊಳಿಸಲು ಉಕಾರವಾಚ್ಯನಾದ ವಿಶ್ವಾಮಿತ್ರ ಋಷಿಯ ಮೂಲಕ ಬ್ರಹರ್ಷಿಯಾದರೂ ಸಹಾ ವಶಿಷ್ಠಾದಿಗಳಿಗೆ ಅಗೋಚರವಾದ ಪ್ರಣವದ ಪರಿಪೂರ್ಣತೆಯನ್ನು ಮೊಟ್ಟ ಮೊದಲನೆಯ ವಾಕ್ಯವಾದ 'ಅಹಂ ವೇದ್ಮಿ ಮಹಾತ್ಮಾನಂ'' ಎಂದು ಪ್ರಣವದ ಮೊದಲನೆಯ ಅಕ್ಷರವನ್ನು ಸ್ವೀಕರಿಸಿದ ಹಿರಿಮೆಯೂ, ಎರಡನೆಯದಾಗಿ ಆ ಪರಾತ್ಪರ ವಸ್ತುವನ್ನು ಆರಾಧ್ಯವಸ್ತುವನ್ನಾಗಿಸಿ, ತನ್ಮೂಲಕ ತನ್ನ ಬ್ರಹ್ಮರ್ಷಿತ್ವದ ಸಾರ್ಥಕ್ಯತೆ ಪಡೆದು, ಗಾಯತ್ರಿ ಮಂತ್ರಾಧಿಷ್ಠಾತನಾದ ವಿಶ್ವಾಮಿತ್ರ ಋಷಿಯು ಗಾಯತ್ರಿ ಮಂತ್ರದ ಪರಿಪೂರ್ಣತೆಯ ಪೂರ್ವಭಾಗವನ್ನು ಶ್ರೀರಾಮಚಂದ್ರನೆಂಬ ಅಕಾರವನ್ನು ಸೀತೆ ಎಂಬ ಮಕಾರದಿಂದ ಎಂದೆಂದೂ ಬೇರ್ಪಡಿಸಲಾಗದಂತೆ ಮಿಥುನೋದ್ದೇಶವೆಂಬ ವಿವಾಹದ ಮೂಲಕ ಉಕಾರ ವಾಚ್ಯನಾದ ಆಚಾರ್ಯನು ಪರಿಪೂರ್ಣಗೊಳಿಸಿ ಪ್ರಣವದ ಹಿರಿಮೆಯನ್ನು ಲೋಕಕ್ಕೆಲ್ಲಾ ಪ್ರಜ್ವಲಿಸುವಂತೆ ಶ್ರೀರಾಮಾಯಣದಿಂದ ಇತಿಹಾಸದ ಮೂಲಕ ಮಾರ್ಗದರ್ಶಿಯಾದನು. ಇದು ಕರ್ಮ ಕಾಂಡದ ಪೂರ್ವ ಭಾಗ ಎಂದು ಶ್ರೀರಾಮಾನುಜ ಸಂಪ್ರದಾಯ ಅನುಯಾಯಿಗಳಾದ ಪೂರ್ವಾಚಾರ್ಯರುಗಳ ನಿರ್ವಿವಾದ ಪ್ರಮಾಣ.



ಯುವವಾಣಿ

# ಧರ್ಮಂ ಚರ

"ಧರ್ಮ" ಜೀವನದ ಒಂದು ಸಹಜ ಸ್ಥಿತಿ. ಅದು ಕೃತ್ರಿಮತೆಯ ಕಡು ವಿರೋಧಿ. ಧಾರಣಾರ್ಥಕ "ಧೃ" ಧಾತುವಿನಿಂದ "ಧರ್ಮ" ಶಬ್ದ ನಿಷ್ಪನ್ನವಾಗಿದೆ. ಧರ್ಮರಹಿತವಾದ ಸಮಾಜದಲ್ಲಿ ಉಸಿರು ಕಟ್ಟುವ ಸ್ಥಿತಿ ನಿರ್ಮಾಣವಾಗುತ್ತದೆ. ಆದ್ದರಿಂದ "ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ. ಧರ್ಮೇಣ ಪಾಪಮಪನುದತಿ, ತಸ್ಮಾತ್ ಧರ್ಮಂ ಪರಮಂ ವದಂತಿ" ಎಂದು ನಾರಾಯಣೋಪನಿಷತ್ತಿನಲ್ಲಿ ಸಾರಲಾಗಿದೆ.

ಸನಾತನ ಧರ್ಮದ ದೃಷ್ಟಿಯಲ್ಲಿ ಮೋಕ್ಷ ಪರಮ ಪುರುಷಾರ್ಥ. ಆದರೆ ಧರ್ಮ ಮೊದಲ ಪುರುಷಾರ್ಥ. ಧರ್ಮವೇ ಬಾಳಿನ ಮೊದಲ ಹೆಜ್ಜೆಯಲ್ಲಿ ಕೈದೀವಿಗೆಯಾಗುತ್ತದೆ. ಮಾನವ ಇತರ ಪ್ರಾಣಿಗಳಿಗಿಂತ ಭಿನ್ನನಾಗುವುದು ತನ್ನ ಧರ್ಮದಿಂದ. ಆದ್ದರಿಂದ "ಧರ್ಮೋ ಹಿ ತೇಷಾಮ್ ಅಧಿಕೋ ವಿಶೇಷೋ ಧರ್ಮೇಣ ಹೀನಾಃ ಪಶುಭಿಃ ಸಮಾನಾಃ" ಎಂದು ಸುಭಾಷಿತ ಹೇಳುತ್ತದೆ. ಮಹರ್ಷಿ ಕಣ್ವರ ತಾಣ "ಧರ್ಮಾಖ್ಯ"ವೆಂದು ಖ್ಯಾತವಾಗಿತ್ತು. ಮಹಾಭಾರತದ ರಣಾಂಗಣವಾದ ಕುರುಕ್ಷೇತ್ರ ಧರ್ಮಕ್ಷೇತ್ರವೆಂದು ಹೆಸರುವಾಸಿಯಾಗಿತ್ತು. ಈ ಧರ್ಮಕ್ಷೇತ್ರದಲ್ಲಿ ಕೃಷ್ಣಾರ್ಜುನ-ಸಂವಾದವೂ, ಫಲತಃ ಗೀತೋಪದೇಶವೂ ನಡೆಯಿತು. ಗೀತಾಚಾರ್ಯನ ದೃಷ್ಟಿಯಲ್ಲಿ ಮಾನವ-ಜೀವನ ಪುರುಷಾರ್ಥಮಯವಾದದ್ದು. ಧರ್ಮಾವಿರುದ್ಧವಾದ ಅರ್ಥ-ಕಾಮಗಳೂ ಪುರುಷಾರ್ಥಗಳಾಗುತ್ತವೆ. ಅರ್ಥ-ಕಾಮಗಳು ಧರ್ಮವಿರುದ್ಧವಾದರೆ ಆ ಸಮಾಜ ಪತನೋನ್ಮುಖವಾಗುತ್ತದೆ. ಅರ್ಥಕಾಮಗಳೂ ಪುರುಷಾರ್ಥಗಳೆನ್ನಿಸಿಕೊಂಡಿದ್ದು ಧರ್ಮದಿಂದ. ಆದ್ದರಿಂದ ಧರ್ಮವು ಸಕಲ ಪುರುಷಾರ್ಥಗಳ ಮಾತೃಸ್ಥಾನದಲ್ಲಿದೆ.

ತತ್ತ್ವಗಳ ಜ್ಞಾನಾನುಭೂತಿಯ ಸಾರವೇ ಧರ್ಮ. "ಧರ್ಮಸ್ಯ ತತ್ತ್ವಂ ನಿಹಿತಂ ಗುಹಾಯಾಮ್" ಎಂದು ಉಪನಿಷದ್ವಚನ ಹೇಳುತ್ತದೆ. ಭಾರತೀಯ ಮನೀಷಿಗಳ ಹೃದಯಕಂದರದಲ್ಲಿ ಧರ್ಮ-ತತ್ತ್ವ ನಿಗೂಢವಾಗಿತ್ತು. ಮೊಗ್ಗು ಹೂವಾಗಿ ಅರಳುವುದು ಎಷ್ಟು ಸಹಜವೋ ನಿಗೂಢ ಧರ್ಮ-ತತ್ತ್ವ ಭಾರತೀಯ ಮನೀಷಿಗಳ ಹೃದಯ-ಕಂದರದಿಂದ ಪ್ರಕಾಶಿಸುವುದು ಅಷ್ಟೇ ಸಹಜವಾದದ್ದು. ಆದ್ದರಿಂದ "ಧರ್ಮ ಜೀವನದ ಸಹಜ ಸ್ಥಿತಿ" ಎಂಬ ಮಾತು ಬಣ್ಣದ ಕಲ್ಪನೆಯಲ್ಲ. ಅದು ಅನುಭವಗಮ್ಯವಾದ ಸತ್ಯ.

"ಧರ್ಮಂ ಚರ" (ತೈತ್ತಿರೀಯೋಪನಿಷತ್ 1–11–1) ಎನ್ನುವುದು ಸನಾತನ ಧರ್ಮದ ಘೋಷಣೆಯಲ್ಲ. ಅದೊಂದು ಅನುಶಾಸನ. ಗುರುಕುಲ ಪದ್ಧತಿಯ ಶಿಕ್ಷಣ ಪಡೆದು ತರುವಾಯ ಹೊರಜಗತ್ತಿನಲ್ಲಿ ಕಾಲಿಡುತ್ತಿರುವ ಸ್ನಾತಕರಿಗೆ ಲಭಿಸುವ ದಿವ್ಯೋಪದೇಶವೇ "ಧರ್ಮಂ ಚರ". ಧರ್ಮ ಜೀವನದ ಎಲ್ಲ ಮೌಲ್ಯಗಳನ್ನೂ ಒಳಗೊಂಡ ಸಹಜ ಅರಳುವಿಕೆಯ ಸ್ಥಿತಿ. ಆದ್ದರಿಂದ "ಧರ್ಮೋ ರಕ್ಷತಿ ರಕ್ಷಿತಃ" ಎಂದು ಸಾರಲಾಗಿದೆ. ರಕ್ಷಿಸಲ್ಪಟ್ಟ ಧರ್ಮವು ತನ್ನ ರಕ್ಷಕನನ್ನೇ ರಕ್ಷಿಸುತ್ತದೆಯೆಂಬ ಮಾತು ಕೇವಲ ಪ್ರಾಸಬದ್ಧವಾದದ್ದಲ್ಲ. ಅದೊಂದು ಸತ್ಯ-ಸಂದೇಶ.

ಧರ್ಮ-ಭಾವನೆಯಿಂದ ಪ್ರೇರಿತರಾದವರು ಬಡಬಗ್ಗರಿಗೆ ಅನ್ನವಸ್ತ್ರಾದಿಗಳನ್ನು ದಾನ ಮಾಡುತ್ತಾರೆ. ದಾನ ಮತ್ತು ತ್ಯಾಗದ ಎಲ್ಲ ಉದಾಹರಣೆಯೂ ಧರ್ಮ ಪ್ರೇರಿತವಾದದ್ದು. ಪೃಥ್ವಿಯು ತನ್ನ ವಿಶಾಲವಾದ ವಕ್ಷಸ್ಥಳದಲ್ಲಿ ವನಸ್ಪತಿಗಳಿಗೆ ಜನ್ಮ ಕೊಡುವುದರಿಂದ "ಮಾತೆ" ಯೆಂದು ಕರೆಯಲ್ಪಡುತ್ತಾಳೆ. (ಋಕ್ಸಂಹಿತಾ 5–84–3) ಆಕಾಶ ಮತ್ತು ಪೃಥ್ವಿ ತಂದೆ-ತಾಯಿಯ ರೂಪದಲ್ಲಿ ಒಂದು ಯುಗ್ಮದಂತೆ ಬಳಸಲ್ಪಡುತ್ತವೆ. (ಋಕ್ಸಂಹಿತಾ 1–89–4) ಭೂಮಾತೆ ನಮ್ಮನ್ನು ಪೋಷಿಸುತ್ತಾಳೆ. ವಾಯು ಜೀವ-ಜಗತ್ತಿಗೆ ಪ್ರಾಣ ನೀಡುತ್ತದೆ. ಸೂರ್ಯ-ಚಂದ್ರರು ಪ್ರಕಾಶ ನೀಡುತ್ತಾರೆ. ಹೀಗೆ ಪ್ರಕೃತಿ ತನ್ನ ಧರ್ಮದಿಂದ ಎಂದೆಂದೂ ಚ್ಯುತವಾಗುವುದಿಲ್ಲ. ಇದೇ "ಸ್ವಧರ್ಮ", "ಸ್ವಧರ್ಮೇ ನಿಧನಂ ಶ್ರೇಯಃ" ಎಂದು ಸಾರುತ್ತ ಗೀತಾಚಾರ್ಯ ಕರ್ತವ್ಯ – ಪಾಲನೆಗೆ ಒತ್ತು ಕೊಡುತ್ತಾನೆ. (ಗೀತಾ. 3-35)

ಅರ್ಥ-ಕಾಮಗಳಿಗೆ ಎರಡನೆಯ ಮತ್ತು ಮೂರನೆಯ ಸ್ಥಾನ ನೀಡಿದ ಸನಾತನ ಧರ್ಮ ಲೋಕಯಾತ್ರೆಯನ್ನು ಸುಗಮಗೊಳಿಸಿದೆ. ಧರ್ಮ ವಿರುದ್ಧವಾದ ಅರ್ಥ-ಕಾಮಗಳ ಸೇವನೆಯಿಂದ ಮನುಷ್ಯ ಆತ್ಮಾಪಹಾರಿಯಾಗುತ್ತಾನೆ. ಧರ್ಮಾತ್ಮರಾದ ಋಷಿಗಳು "ಕಿಂ ತೇನ ನ ಕೃತಂ ಪಾಪಂ ಚೋರೇಣಾತ್ಮಾಪಹಾರಿಣಾ ?" ಎನ್ನುತ್ತ ಪಾಪ-ಪ್ರವೃತ್ತಿಯನ್ನು ಆತ್ಮಾಪಹರಣದ ಸ್ಥಿತಿಯೆಂದು ಬಣ್ಣಿಸುತ್ತಾರೆ. ವಿಷಯ ಸುಖದ ಯೋಚನೆಯಿಂದ ಅದರಲ್ಲಿ ಆಸಕ್ತಿಯೂ, ಆಸಕ್ತಿಯಿಂದ ಕಾಮವೂ, ಕಾಮದಿಂದ ಕ್ರೋಧವೂ, ಕ್ರೋಧದಿಂದ ಸಂಮೋಹವೂ, ಸಂಮೋಹದಿಂದ ಸ್ಮೃತಿಭ್ರಂಶವೂ, ಸ್ಮೃತಿಭ್ರಂಶದಿಂದ ಬುದ್ಧಿನಾಶವೂ ಉಂಟಾಗುತ್ತದೆ. (ಗೀತಾ 2-62, 63) ಅಂತೂ ಧರ್ಮದ ಕೊಂಡಿ ತಪ್ಪಿದಾಗ ಅನರ್ಥ ಪರಂಪರೆಯನ್ನೆದುರಿಸಬೇಕಾಗುತ್ತದೆ. ಆತ್ಮದರ್ಶನದಿಂದ ವಂಚಿತನಾಗುವುದೇ ಪಾಪಕೃತ್ಯ. ವಾಲ್ಮೀಕಿಮಹರ್ಷಿಗಳು ಆತ್ಮಸ್ವರೂಪಿಯಾದ ರಾಮನನ್ನು ಬಣ್ಣಿಸುತ್ತ "ರಾಮಕರ್ಮಕ ದರ್ಶನ" ಮತ್ತು "ರಾಮಕರ್ತೃಕ ದರ್ಶನ"ದಿಂದ ವಿಮುಖನಾಗಿ ತನ್ನನ್ನು ತಾನೇ ವಂಚಿಸಿಕೊಳ್ಳುತ್ತಿರುವ ಮನುಷ್ಯನನ್ನು ನಿಂದಿಸುತ್ತಾರೆ. (ಅಯೋಧ್ಯಾಕಾಂಡ 17–15)

ಮಾನವ ಅಮೃತ-ಪುತ್ರ. ಜ್ಞಾನ ಅವನ ಜನ್ಮಸಿದ್ಧ ಹಕ್ಕು. ಅಮೃತ ಅವನ ಪೈತೃಕ ಸಂಪತ್ತಿಯಾಗಿದೆ. ಆತ್ಮದರ್ಶನವೇ ಅಮೃತತತ್ತ್ವ ಪ್ರಾಪ್ತಿಯ ಸೋಪಾನ. ಕಾಮ ಜ್ಞಾನಕ್ಕೆ ಬಾಧಕವಾಗಿದೆ. ಆದ್ದರಿಂದ ಮುಕ್ಕಣ್ಣನಾದ ಶಂಕರನು ತನ್ನ ಮೂರನೆಯ ಕಣ್ಣಿನಿಂದ ಕಾಮವನ್ನು ಸುಟ್ಟುಹಾಕಿದ. "ಅರ್ಜುನ! ದಿವ್ಯಂ ದದಾಮಿ ತೇ ಚಕ್ಷುಃ" ಎನ್ನುತ್ತ ಗೀತಾಚಾರ್ಯ (ಗೀತೆ 11-8) ಅರ್ಜುನನಿಗೆ ತನ್ನ ವಿಶ್ವರೂಪ ದರ್ಶನಕ್ಕಾಗಿ ದಿವ್ಯ ಚಕ್ಷುಸ್ಸನ್ನು ನೀಡುತ್ತಾರೆ. ಅಂತೂ ಲೋಕೋತ್ತರ ಸತ್ಯವನ್ನು ಗ್ರಹಿಸಲು ನಮ್ಮ ಪ್ರಾಕೃತಕಾಂಗಗಳು ಅಸಮರ್ಥವೆನ್ನುವುದು ಸ್ಪಷ್ಟ.

ಕಾಮ ಸರ್ವಥಾ ತ್ಯಾಜ್ಯವಲ್ಲ. ಲೋಕಯಾತ್ರೆ ಸುಗಮವಾಗಲು "ಧರ್ಮಾವಿರುದ್ಧ ಕಾಮ" ಅಪೇಕ್ಷಿತವಾದದ್ದು. ಆದ್ದರಿಂದ ಗೀತಾಚಾರ್ಯ "ಧರ್ಮಾವಿರುದ್ಧೋ ಭೂತೇಷು ಕಾಮೋಸ್ಮಿ" (ಗೀತಾ 7–11) ಎಂದು ಸಾರುತ್ತಾನೆ. ಶುದ್ಧ ಆಚಾರವೇ ಸಚ್ಚಾರಿತ್ರ್ಯ. ಧರ್ಮ ಆಚಾರ ಮೂಲಕವಾದದ್ದು. ಧರ್ಮದ ಪ್ರಭು ಅಚ್ಯುತ. (ಆಚಾರ ಪ್ರಭವೋ ಧರ್ಮಃ ಧರ್ಮಸ್ಯ ಪ್ರಭು ರಚ್ಯುತಃ)

ಸ್ವರ್ಗ-ನರಕಗಳ ವಿಧಾಯಕನಾದ ಯಮರಾಜನು ನಚಿಕೇತನಿಗೆ ಅರ್ಥ-ಕಾಮಗಳ

ಶ್ರೀ ವಿ. ಡಿ. ಹೆಗಡೆ

ಪ್ರಲೋಭನೆಯಿಂದ ಮರುಳುಮಾಡಿದ. ಆದರೂ ನಚಿಕೇತ ತನ್ನ ದೃಢಸಂಕಲ್ಪದಿಂದ ವಿಚಲಿತ ನಾಗದೇ ಅಚ್ಯುತ (ಹಾದಿತಪ್ಪದವ)ನಾಗಿ ಉಳಿದ ಮತ್ತು ಪರಮಪುರುಷಾರ್ಥವನ್ನೇ ಯಾಚಿಸಿದ. ಅರ್ಥ ಮತ್ತು ಕಾಮ–ಪರಾಙ್ಮುಖನಾದ ನಚಿಕೇತ ಆತ್ಮಾಭಿಮುಖನಾಗಿದ್ದ. ಆತ್ಮಪರಾಙ್ಮುಖ ನಾದವನು ನಾಶ ಹೊಂದುತ್ತಾನೆ. ರಾಮನನ್ನು ಕುರಿತ ವಾಲಿಯ ಆಧಿಕ್ಷೇಪದಿಂದ ಈ ಸತ್ಯ ಸ್ಥಾಪಿತ ವಾಗುತ್ತದೆ.

ಪರಾಙ್ಮುಖವಧಂ ಕೃತ್ವಾ ಕೋನು
ಪ್ರಾಪ್ತ ಸ್ತ್ವಯಾ ಗುಣಃ ।

(ವಾಲ್ಮೀಕಿ ರಾಮಾಯಣ, ಕಿಷ್ಕಿಂಧಾಕಾಂಡ 17–15)

ವಾಲಿ ತನ್ನನ್ನು ಪರಾಙ್ಮುಖನೆಂದು ತಿಳಿಯುತ್ತಾನೆ. ವಾಲಿ ರಾಮಪರಾಙ್ಮುಖನೂ ಆತ್ಮಪರಾಙ್ಮುಖನೂ ಆಗಿದ್ದ. ಯಾಕೆಂದರೆ ಅತ (ಅರ್ಥ-ಕಾಮಾದಿ) ವಿಷಯಾಭಿಮುಖನಾಗಿದ್ದ. ಆದ್ದರಿಂದ ಹತನಾದ. ಅಂತತೋ ಗತ್ವಾ ರಾಮನ ಸಮರ್ಥನೆಯನ್ನು ಕೊಂಡಾಡುತ್ತ ವಾಲಿಯು–

ತ್ವಂ ಹಿ ದೃಷ್ಟಾರ್ಥ ತತ್ತ್ವಜ್ಞಃ
ಪ್ರಜಾನಾಂ ಚ ಹಿತೇ ರತಃ ।
ಕಾರ್ಯಕಾರಣಸಿದ್ಧೌ ತೇ
ಪ್ರಸನ್ನಾ ಬುದ್ಧಿರವ್ಯಯಾ ॥

(ವಾಲ್ಮೀಕಿರಾಮಾಯಣ, ಕಿಷ್ಕಿಂಧಾಕಾಂಡ 18–49)

ಎಂದು ಹೇಳುತ್ತಾನೆ.

ರಾಮನ ದೃಷ್ಟಿಯಲ್ಲಿ 'ಧರ್ಮ' ಶ್ರೇಷ್ಠವಾದದ್ದು. ರಾಜ್ಯವನ್ನು ತೊರೆದು ವನಾಭಿಮುಖನಾದ ರಾಮನಿಗೆ ಮಾತೆ ಕೌಸಲ್ಯೆ "ಧರ್ಮವನ್ನು ಪಾಲಿಸು'' ಎಂದು ಆಶೀರ್ವದಿಸುತ್ತಾಳೆ–

ಯಂ ತ್ವಂ ಪಾಲಯಸಿ ಧರ್ಮಂ
ಧೃತ್ಯಾ ಚ ನಿಯಮೇನ ಚ ।
ಸ ವೈ ರಾಘವಶಾರ್ದೂಲ
ಧರ್ಮಸ್ತ್ವಾಮ್ ಅಭಿರಕ್ಷತು ॥

(ವಾಲ್ಮೀಕಿರಾಮಾಯಣ ಅಯೋಧ್ಯಾಕಾಂಡ 25–3)

ರಾಮನು ಅರ್ಥಪರಾಙ್ಮುಖನಾಗಿ ಕೇವಲ ಧರ್ಮವನ್ನು ವರಿಸುತ್ತಾನೆ.

ನಾಹಮರ್ಥ ಪರೋ ದೇವಿ
ಲೋಕ ಮಾವಸ್ತುಮುತ್ಸಹೇ ।
ವಿದ್ಧಿ ಮಾಮೃಷಿಭಿಸ್ತುಲ್ಯಂ
ಕೇವಲಂ ಧರ್ಮಮಾಸ್ಥಿತಂ ॥

(ವಾಲ್ಮೀಕಿ ರಾಮಾಯಣ, ಅಯೋಧ್ಯಾಕಾಂಡ 19–20)

ರಾಜ್ಯತ್ಯಾಗ ರಾಮನನ್ನು ಎದೆಗುಂದಿಸುವದಿಲ್ಲ, ವನಾಭಿಮುಖನಾದ ರಾಮನಲ್ಲಿ ಚಿತ್ತ ವಿಕಾರ ಎಳ್ಳಷ್ಟೂ ಉಂಟಾಗುವದಿಲ್ಲ.

ನ ವನಂ ಗಂತುಕಾಮಸ್ಯ
ತ್ಯಜತಶ್ಚ ವಸುಂಧರಾಮ್
ಸರ್ವಲೋಕಾತಿಗಸ್ಯೇವ
ಲಕ್ಷ್ಯತೇ ಚಿತ್ತವಿಕ್ರಿಯಾ ॥

–(ಅಯೋಧ್ಯಾಕಾಂಡ 19–33)

ವಾಲ್ಮೀಕಿಯ ದೃಷ್ಟಿಯಲ್ಲಿ ರಾಮ ಧರ್ಮದ ಸಾಕಾರ ರೂಪ (ರಾಮೋ ವಿಗ್ರಹವಾನ್ ಧರ್ಮಃ) (ಅರಣ್ಯಕಾಂಡ 37–13) ರಾಮ ಸನಾತನ ಧರ್ಮವೃಕ್ಷದ ಮೂಲ. ಇತರರೆಲ್ಲ ಆ ವೃಕ್ಷದ ಎಲೆ, ಹೂವು, ಹಣ್ಣು ಮತ್ತು ಟೊಂಗೆಗಳು (ಅಯೋಧ್ಯಾಕಾಂಡ 33–15) ಹೀಗೆ ರಾಮಾಯಣದಲ್ಲಿ ಪ್ರಥಮ ಪುರುಷಾರ್ಥವಾದ 'ಧರ್ಮ'ದ ವಿವೇಚನೆ ಹೆಜ್ಜೆ ಹೆಜ್ಜೆಗೂ ಸೂಕ್ಷ್ಮಾತಿ ಸೂಕ್ಷ್ಮವಾಗುತ್ತದೆ.

'ಧರ್ಮ' ಒಂದು ಮಹತ್ತತ್ತ್ವ. ಅದರಲ್ಲಿ ಇಹ–ಪರಗಳೆರಡೂ ಅಡಕವಾಗುತ್ತದೆ. ಕಣಾದ ಮಹರ್ಷಿಗಳ ಪ್ರಕಾರ "ಯಾವುದರಿಂದ ಅಭ್ಯುದಯ ಮತ್ತು ನಿಃಶ್ರೇಯಸ್ಸು ಸಿದ್ಧಿಸುವುದೋ ಅದೇ ಧರ್ಮ" ಭೌತಿಕ ಕ್ಷೇತ್ರದ ಏಳ್ಗೆ 'ಅಭ್ಯುದಯ' ನಿಃಶ್ರೇಯಸ್ಸೆಂದರೆ ಆಧ್ಯಾತ್ಮಿಕ ಕ್ಷೇತ್ರದ ಸಿದ್ಧಿ. ಆದ್ದರಿಂದ "ಧರ್ಮಂ ಚರ" ಎಂಬ ಅನುಶಾಸನಕ್ಕೆ ಬದ್ಧನಾದರೆ ಮಾನವ ಜೀವನದ ಸಹಜ ಸ್ಥಿತಿಗೆ ಮರಳಿದಂತಾಗುತ್ತದೆ.

---

# ಕನ್ನಡ ಜನಪದ ಕಾವ್ಯದಲ್ಲಿ ಸೀತೆ



ರಾಮಾಯಣದ ಸೀತೆ ಭಾರತೀಯರಿಗೆ ಒಬ್ಬ ಆದರ್ಶ ಮಹಿಳೆ. ವಾಲ್ಮೀಕಿ ಅವಳನ್ನು ರಾಜಕುಮಾರಿಯಾಗಿ, ರಾಜಪತ್ನಿಯಾಗಿ, ರಾಜ ಸೊಸೆಯಾಗಿ ವರ್ಣಿಸಿದ್ದಾನೆ. ಹಾಗೆ ವರ್ಣಿಸುವುದು ಅವನ ಉದ್ದೇಶವೂ ಹೌದು. ವಾಲ್ಮೀಕಿಯ ನಂತರ ಈ ಕಥೆ ಭಾರತೀಯರ ಜನಜೀವನದಲ್ಲಿ ಹಾಸು ಹೊಕ್ಕಾಗಿ ಬೆರೆತು ಹೋಯಿತು. ಅರಮನೆಗಳ ಅಂತಸ್ತಿಗೆ ತಕ್ಕಂತೆ ಸ್ಪಂದಿಸಿದ ರಾಮಾಯಣದ ರಾಜವಂಶೀಯ ಪಾತ್ರಗಳನ್ನು ಜಾನಪದ ಕವಿಗಳು ಗ್ರಾಮೀಣ ಜೀವನಕ್ಕೆ ತಕ್ಕಂತೆ ಚಿತ್ರಿಸಿದ್ದಾರೆ. ವಾಲ್ಮೀಕಿ ಗೌಣವೆಂದು ಭಾವಿಸಿರಬಹುದಾದ ಘಟನೆಗಳಿಗೆ, ನಡವಳಿಕೆಗಳಿಗೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟು ಜಾನಪದ ಕವಿಗಳು ತಮ್ಮದೇ ಆದ ರೀತಿಯಲ್ಲಿ ವರ್ಣಿಸಿದರು. ವಾಲ್ಮೀಕಿ ವರ್ಣಿಸಿರುವ ಘಟನೆಗಳನ್ನೇ ಹೇಳುವಾಗ ಜಾನಪದರು ಅದಕ್ಕೆ ಹೊಸ ದೃಷ್ಟಿಯನ್ನು ಕೊಟ್ಟು ವರ್ಣಿಸಿರುವುದನ್ನೂ ಕಾಣುತ್ತೇವೆ.

ಕನ್ನಡ ಜನಪದ ಸಾಹಿತ್ಯದಲ್ಲಿ ಸೀತೆಯ ಬಗೆಗೆ ಹೇಳಿರುವ ಕೆಲವು ಸಂಗತಿಗಳನ್ನು ಇಲ್ಲಿ ನೋಡೋಣ.

### ಜಾನಕಿ ಗಂಡನಮನೆಗೆ ಹೊರಟಾಳೆ:

ಮಿಥಿಲೆಯಲ್ಲಿ ಸೀತಾ – ರಾಮರ ವಿವಾಹ ನಡೆದು, ನಾಗವಲ್ಲಿಯ ಕಾರ್ಯಕ್ರಮವೂ ಮುಗಿದಿದೆ. ಈ ವಿವಾಹ ನೋಡಲು ಬಂದ ಋಷಿಗಳು ಬೃಹಸ್ಪತಿಯ ಬಳಿಗೆ ಬಂದು, ಅಯೋಧ್ಯೆಗೆ ದಿಬ್ಬಣ ಹೊರಡಲು ಶುಭ ಮುಹೂರ್ತ ಯಾವುದು? ಎಂದು ಕೇಳುತ್ತಾರೆ. ಬೃಹಸ್ಪತಿ. 'ಇಂದಿನ ದಿನವೇ ಕರಲೇಸು' ಎಂದು ಹೇಳುತ್ತಾನೆ. ಈ ವಿಚಾರವನ್ನು ಋಷಿಗಳು ದಶರಥನಿಗೆ ತಿಳಿಸುತ್ತಾರೆ. ದಶರಥನ ಅಪ್ಪಣೆಯಂತೆ ಸುಮಂಗಲಿಯರು ಜನಕನ ಅರಮನೆಗೆ ಈ ವಿಷಯ ತಿಳಿಸಲು ಹೊರಡುತ್ತಾನೆ–

ಹೊಸ ಬಣ್ಣದ ಸೀರೆ ಅರಿಶಿನ ಕುಂಕುಮ।
ಬಾಳೆಹಣ್ಣು ಕನಕದ್ದ ರಿವಾಣದೊಳಗಿಟ್ಟು।
ನಾರಿಯರು ಜನಕನರಮನೆಗೆ ನಡೆದಾರು॥

ಈ ನಾರಿಯರ ಜೊತೆಗೆ ಹಿರಿಯ ಗಂಡಸರೂ ಇದ್ದಾರೆ. ಅವರು ಜನಕನಿಗೆ ದಿಬ್ಬಣ ಹೊರಡಬೇಕಾದ ವಿಷಯ ತಿಳಿಸುತ್ತಾರೆ. ಇದನ್ನು ಕೇಳಿದ ಜನಕನಿಗೂ ಸಂತೋಷವಾಗುತ್ತದೆ. ವಿಷಯ ತಿಳಿಸಲು ಬಂದ, ದಶರಥನ ಕಡೆಯವರನ್ನೆಲ್ಲಾ ಉಚಿತ ಸತ್ಕಾರದಿಂದ ಕಳಿಸಿ, ಜನಕ ನೇರವಾಗಿ ಸೀತೆಯ ಬಳಿಗೆ ಬರುತ್ತಾನೆ. ಅವಳು ಗಂಡನ ಮನೆಗೆ ಹೊರಡಬೇಕಾದ ಸಂದರ್ಭವನ್ನು ಜನಕ ತಿಳಿಸುತ್ತಾನೆ. ಸೀತೆಗೆ ಇನ್ನೂ ಆಟದ ವಯಸ್ಸು. ಆಟವೇ ಅವಳ ಪ್ರಪಂಚ. ಗಂಡನ ಮನೆಗೆ ಹೋಗಬೇಕು ಎಂದು ತಿಳಿಸಿದ ತಂದೆಯ ಮುಖವನ್ನು ಮುಗ್ಧಳಾಗಿ ನೋಡುತ್ತಾ, ಸೀತೆ–

ಆಡೋ ಆಟವ ಬಿಟ್ಟು।
ಹೂಡಿದೊಲೆಗಳ ಬಿಟ್ಟು।
ನೂರಾರು ಮಂದಿ ಗೆಳತೀರ। ಬಿಟ್ಟಿಕ್ಕಿ।
ಹ್ಯಾಂಗ್ಹೋಗಲಪ್ಪ ಮನಿಗಿಂದು–

–ಎಂದು ಕೇಳುತ್ತಾಳೆ. ಈ ಮುಗ್ಧ ಮಾತುಗಳನ್ನು ಕೇಳಿದ ಜನಕನಿಗೆ ಕರುಳು ಚುರುಕ್ ಎನ್ನುತ್ತದೆ. ಇಂತಹ ಮುಗ್ಧೆಯನ್ನು ಹೇಗೆ ಕಳಿಸುವುದು? ಎಂದು ಸ್ವಲ್ಪ ಹೊತ್ತು ಕಳವಳಗೊಳ್ಳುತ್ತಾನೆ. ಮತ್ತೆ ತನ್ನ ಕರ್ತವ್ಯಕ್ಕೆ ಓಗೊಟ್ಟ ಜನಕ ಸೀತೆಯನ್ನು ಸಮಾಧಾನಗೊಳಿಸುತ್ತಾ–

ಆಡೋ ಆಟವ ಕೊಡುವೆ।
ಹೂಡಿದೊಲೆಗಳ ಕೊಡುವೆ।
ನೂರಾರು ಮಂದಿ ಗೆಳತೀರ। ಕೊಡುವೆನು।
ಹೋಗಿ ಬಾ ಮಗಳೆ ಮನಿಗಿಂದು॥

–ಎನ್ನುತ್ತಾನೆ. ಸೀತೆಯ ಸ್ನೇಹಕ್ಕೆ ಪಾತ್ರವಾದ ಹಸುಗಳ ಹಿಂಡೂ ಮಿಥಿಲೆಯಲ್ಲಿತ್ತು. ಇವುಗಳನ್ನು ಬಿಟ್ಟು ಹೇಗೆ ಹೋಗಲಿ ಎನ್ನುತ್ತಾಳೆ ಸೀತೆ. ಅವನ್ನೆಲ್ಲಾ ಅವಳೊಡನೆಯೇ ಕಳಿಸುವುದಾಗಿ ಹೇಳಿ, ನೆತ್ತಿಯ ಮೇಲೆ ಸುಳಿ ಇರುವ ಆಕಳಿಗೆ ಮುತ್ತಿನ ಡಾಬನ್ನೂ, ಕೆನ್ನೆಯ ಮೇಲೆ ಸುಳಿಯಿರುವ ಆಕಳಿಗೆ ಚಿನ್ನದ ಡಾಬನ್ನೂ ಹಾಕಿಸಿ, ಕಳಿಸಿಕೊಡುತ್ತೇನೆ ಎಂದು ಆಶ್ವಾಸನೆ ನೀಡುತ್ತಾನೆ, ಜನಕ. ಗೆಳತಿಯರು, ಪ್ರೀತಿಯ ಹಸುಗಳು–ತನ್ನೊಡನೆಯೇ ಬರುತ್ತಾರೆ ಎನ್ನುವುದನ್ನು ತಿಳಿದು, ಸೀತೆಗೆ, ಸಮಾಧಾನವಾಗುತ್ತದೆ.

ಆ ದಿನಗಳಲ್ಲಿ ಹಳ್ಳಿಗರ ಜೀವನದಲ್ಲಿ ಶ್ರೀಮಂತ ಬಡವ ಎಂಬ ಭೇದವಾಗಲೀ, ಅರಸು – ಆಳು ಎಂಬ ವ್ಯತ್ಯಾಸವಾಗಲಿ ಇರಲಿಲ್ಲ. ಊರಿನ ಒಬ್ಬರ ಮನೆಯ ಸುಖ–ಸಂಭ್ರಮ ಎಲ್ಲರ ಮನೆಯ ಸುಖ–ಸಂಭ್ರಮ ಆಗಿರುತ್ತಿತ್ತು. ಒಬ್ಬರ ಮನೆಯ ದುಃಖ–ದುಮ್ಮಾನ ಎಲ್ಲರ ಮನೆಯ ದುಃಖ ದುಮ್ಮಾನವಾಗಿರುತ್ತಿತ್ತು. ಜನಪದ ಸಾಹಿತ್ಯದಲ್ಲಿ ಮಾತ್ರ ಸಿಗುವ ಈ ಅಪೂರ್ವ ಅನುಭವ ಪ್ರಾಯಶಃ ಮಹಾಕಾವ್ಯಗಳಲ್ಲಿ ಅಪರೂಪ. ಸೀತೆ ತೌರೂರನ್ನು ಬಿಟ್ಟು ಗಂಡನ ಮನೆಗೆ ಹೋಗುತ್ತಾಳೆ ಎಂದರೆ ಅರಮನೆಗೆ ಮಾತ್ರವಲ್ಲ. ಮಿಥಿಲೆಯ ಎಲ್ಲ ವರ್ಗದ ಜನರಿಗೂ ಸಂಭ್ರಮ. ಕುಶಲಕರ್ಮಿಗಳಿಗಂತೂ ಸಡಗರವೋ ಸಡಗರ. ಚಿನ್ನದ ಒಪ್ಪ ಮಾಸಿದರೆ ಚಿಕ್ಕವಳಾದ ಸೀತೆ ಮುನಿವಳು ಎಂದು ಅಕ್ಕಸಾಲಿಗರು ಹೊಸದಾಗಿ ಅಚ್ಚುಕಟ್ಟಾದ ಒಪ್ಪಹಾಕಿ ಚಿನ್ನದ ಆಭರಣಗಳನ್ನು ತಂದುಕೊಡುತ್ತಾರೆ. ಪಟ್ಟೆಯ ಕುಪ್ಪಸವನ್ನು ಚಿಪ್ಪಿಗ ಒಪ್ಪವಾಗಿ ತಂದುಕೊಡುತ್ತಾನೆ.

ಗಂಡನ ಮನೆಗೆ ಹೋಗುವ ಮಗಳಿಗೆ ಬುದ್ಧಿಯ ಮಾತು ಹೇಳುವ ಪ್ರಸಂಗವೂ ಹೃದಯಸ್ಪರ್ಶಿಯಾದದ್ದೆ. ಸೀತೆಯನ್ನು ಬಳಿಗೆ ಸೆಳೆದು ನೇವರಿಸುತ್ತಾ ಜನಕ ಹೇಳುವ ಮಾತು ಮನನೀಯವಾಗಿವೆ–

ಅತ್ತೆಯ ಕಂಡರೆ ಎತ್ತಿ ಮಾತಾಡದಿರು।
ಉತ್ತರವ ನೀನು ಕೊಡದಿರು। ಜಾನಕಿ।
ಮಗಳೆ ಕೇಳೆಂದ ಜನಕೇಂದ್ರ॥

ಶ್ರೀ ಕೆ. ಜಗನ್ನಾಥಶಾಸ್ತ್ರಿ

ಮೂರು ಸಂಜೆ ಹೊತ್ತು ।
ಅರಳು ನಿದ್ದೆಯ ಕಣ್ಣು ।
ಶಾಲೆ ಸೆರಗ್ಹಾಕಿ ಮಲಗ್ಯೆಡ । ಜಾನಕಿ ।
ಮಗಳೆ ಕೇಳೆಂದ ಜನಕೇಂದ್ರ ॥

ಸೀತೆ ವಯಸ್ಸಿನಲ್ಲಿ ಚಿಕ್ಕವಳು. ಆದರೆ ಅವಳು ಸುಸಂಸ್ಕೃತೆ. ತಾನು ಹೆತ್ತ ಮನೆಯವರನ್ನು ಬಿಟ್ಟು ಹೊರಡುತ್ತಿದ್ದೇನೆ ಎಂಬ ಭಾವನೆ ಈಗ ಅವಳಲ್ಲಿ ಮೂಡಿದೆ. ಅವಳು ಮೂಕವೇದನೆಯನ್ನು ಅನುಭವಿಸುತ್ತಿದ್ದಾಳೆ. ಸೀತೆಯ ಈ ವೇದನೆಯನ್ನು ಜನಪದ ಕವಿಯ ಮಾತಿನಲ್ಲೇ ಕೇಳೋಣ–

ಪಟ್ಟೆ ಸೀರೆಯ ಪುಟ್ಟ ಗಳಿಗೆ ಮಾಡಿ ।
ಬಾಗಿಲ ಕದವ ಹಿಡಕೊಂಡು । ಹೇಳಿದಳೆ ।
ಈಗಾದರ್ಹೋಗಿ ಬರುತೀನಿ ॥
ಸಾಲಿಯ ಸೀರೆಯ ಸಣ್ಣ ಗಳಿಗೆ ಮಾಡಿ ।
ಚಿನ್ನದ ಕದವ ಹಿಡಕೊಂಡು । ಹೇಳಿದಳೆ ।
ಮತ್ತಾದರ್ಹೋಗಿ ಬರುತೀನಿ ॥
ಹೆತ್ತ ತಾಯಿಯ ಮನೆಯ ಹೊಸ್ತಿಲನಿಳಿವಾಗ ।
ಹೊಟ್ಟೆಯುಳಿ ದುಡುಮ ಹೊಯಿದಂತೆ ।
ಕಣ್ಣೀರು ।
ಬಟ್ಟು ಮುತ್ತಾಗಿ ಹರಿದಾವೆ ॥

## ಜಾನಕಿ ಅಡಿಗೆ ಮಾಡಿದಳೆ :

ಜನಪದ ಸಾಹಿತ್ಯ ಗ್ರಾಮೀಣ ಜನ ಜೀವನದ ಪ್ರತಿಬಿಂಬ. ಗ್ರಾಮಜೀವನದ ನಂಬಿಕೆ ಮತ್ತು ಸಂಪ್ರದಾಯಗಳ ಪ್ರಕಾರ, ಸೊಸೆಯಾಗಿ ಬಂದವಳು, ಗಂಡನ ಮನೆಯಲ್ಲಿ ಮುಖ್ಯವಾಗಿ ವಹಿಸಿಕೊಳ್ಳಬೇಕಾದ ಹೊಣೆಗಾರಿಕೆ ಎಂದರೆ ಅಡುಗೆ ಮಾಡುವುದು. ಅಡಿಗೆ ಮಾಡಿ, ಬಡಿಸಿ, ಅತ್ತೆ–ಮಾವ ; ಅತ್ತಿಗೆ – ನಾದಿನಿ; ಭಾವ–ಮೈದುನ ತನ್ನ ಗಂಡ– ಇವರಿಂದ ಸೈ ಎನಿಸಿಕೊಂಡರೆ ಅವಳೇ ಶ್ರೇಷ್ಠ ಸೊಸೆ ಎಂಬ ನಂಬಿಕೆ ಜನಪದದ ಸರಳ ಜೀವಿಗಳಲ್ಲಿ. ಜನಪದ ಕವಿಗೆ ಸೀತೆಯ ಬಗೆಗೂ ಇದೇ ಅನಿಸಿಕೆಯೇ ಇದೆ. ಅವಳು ಅರಸುಗುವರಿಯೂ ಹೌದು; ಅರಸು ಮಡದಿಯೂ ಹೌದು. ಆದರೆ ಅವಳು ಅಯೋಧ್ಯೆಯ ದಶರಥನ ಅರಮನೆಗೆ ಬಂದಿರುವುದು ಸೊಸೆಯಾಗಿ ; ಅದರಲ್ಲೂ ಹಿರಿಯ ಸೊಸೆಯಾಗಿ. ಆದ್ದರಿಂದ ಇಲ್ಲಿ ಅವಳು ಅಡುಗೆ ಮಾಡಲೇಬೇಕು. ಜನಪದ ಕವಿ ಅವಳಿಂದ ಅಡುಗೆ ಮಾಡಿಸಿಯೂ ಇದ್ದಾನೆ.

ಸೀತೆ ಅಡುಗೆ ಮಾಡಲು ಸಿದ್ಧಳಾಗಿದ್ದಾಳೆ. ಪಾತ್ರೆಗಳು ಎಲ್ಲಿವೆ ಎಂಬುದು ತಿಳಿಯದು. ಸೀತೆಗೆ ಯಾರನ್ನು ಕೇಳಬೇಕು ಎನ್ನುವುದೂ ತಿಳಿಯದು. ಯಾರನ್ನು ಕೇಳಲೂ ಸಂಕೋಚ. ಇವಳ ಸಹಾಯಕ್ಕೆ ಮಂಚಾಲೆ (ಪ್ರಾಯಶಃ ಇವಳು ಮಂಥರೆ ಇರಬೇಕು) ಬರುತ್ತಾಳೆ. ಇವಳು ಸೀತೆಯನ್ನು ಕವುಸಲೆ ಬಳಿಗೆ ಕರೆತರುತ್ತಾಳೆ. ಕವುಸಲೆಗೆ ವಿಷಯ ತಿಳಿಸುತ್ತಾಳೆ. ಅವಳು ನಗುತ್ತಾ ಮುತ್ತಿನ ಬಾರುಣಿ, ಮುತ್ತಿನ ಸಟ್ಟುಗ, ತಪ್ಪಲಿ–ಮುಂತಾದುವನ್ನು ತರಿಸಿಕೊಡುತ್ತಾಳೆ. ಜಾನಕಿ ಅಡುಗೆ ಮನೆಗೆ ಬರುತ್ತಾಳೆ; ಅಗ್ನಿ ಪುಟ ಮಾಡುತ್ತಾಳೆ. ನೀರು ಕುದಿಯಲು ಪ್ರಾರಂಭವಾದಾಗ ಅಕ್ಕಿಯನ್ನು ತಪ್ಪಲಿಗೆ ಸುರಿಯುತ್ತಾಳೆ. ಮುತ್ತಿನ ಸಟ್ಟುಗವೂರಿ ತೊಳಸುತ್ತಾಳೆ. ಅಡುಗೆ ಆಯಿತು. ಆಮೇಲೆ ದಧಿ ಕಡೆದು ನವನೀತ ತೆಗೆಯುತ್ತಾಳೆ. ಅದನ್ನು ಕಾಯಿಸಿ ಘೃತ ಮಾಡುತ್ತಾಳೆ; ಚೂತ ಫಲವನ್ನು ಸುಲಿದು, ಅದನ್ನು ಏಲಕ್ಕಿ, ಸಕ್ಕರೆ ಮತ್ತು ಕ್ಷೀರದೊಡನೆ ಮಿಶ್ರಣಗೊಳಿಸಿ ಸೀಕರಣೆ ಮಾಡುತ್ತಾಳೆ; ಅನಂತರ ಮಜ್ಜಿಗೆಗೆ ಶುಂಠಿ ಬೆರೆಸಿ ಇಡುತ್ತಾಳೆ. ಇದೆಲ್ಲಾ ಸಿದ್ಧವಾದ ಮೇಲೆ ತೊವ್ವೆ, ಕೋಸಂಬರಿಕಾಯಿ, ಸಾಸುವೆ–ಇವನ್ನೂ ತಯಾರಿಸಿ ಇಡುತ್ತಾಳೆ. ಈ ರೀತಿ–

ಎಂಬತ್ತೇಳು ಬಗೆಯ ಕಜ್ಜಾ ।
ಎಂಬತ್ತು ಬಗೆಯ ಪರಿಮಳ ಮೃಷ್ಟಾನ್ನ ।
ತರತರದ ಷಡ್ರಸ ಪಲ್ಯಗಳು–

–ಇವುಗಳನ್ನೂ, ಜೊತೆಗೆ ಹಪ್ಪಳ ಸಂಡಿಗೆಗಳನ್ನು ಸಿದ್ಧಮಾಡಿಡುತ್ತಾಳೆ. ಅನಂತರ ಪತಿ ರಘುರಾಮನಿಗೆ, ಇತರ ಎಲ್ಲರಿಗೆ ಊಟ ಬಡಿಸುತ್ತಾಳೆ.

## ರಾಮನರಸಿ ಋತುಮತಿಯಾದಳು :

ವಿವಾಹದ ನಂತರ ದಿಬ್ಬಣದ ಜೊತೆಗೆ ಅಯೋಧ್ಯೆಗೆ ಬಂದು, ಅಲ್ಲಿ ಕೆಲವು ದಿನವಿದ್ದು, ಸೀತೆ, ಮಿಥಿಲೆಗೆ ಹಿಂತಿರುಗಿದ್ದಾಳೆ. ಮಿಥಿಲೆಗೆ ಬಂದನಂತರವೂ ಕೆಲವು ದಿನ ಗೆಳತಿಯರೊಂದಿಗೆ ಆಡುತ್ತಾ ಕೆಲ ದಿನ ಕಳೆದಿದ್ದಾಳೆ.

ಈಗ, ಸೀತೆಗೆ ಋತುಮತಿಯಾಗುವ ವಯಸ್ಸು. ಅವಳು ಋತುಮತಿಯಾಗುವ ದಿನದ ಹಿಂದಿನ ರಾತ್ರಿ, ಅಯೋಧ್ಯೆಯಲ್ಲಿದ್ದ ಶ್ರೀರಾಮನಿಗೆ ಒಂದು ಕನಸು ಬೀಳುತ್ತದೆ. ಕನಸು ಮುಗಿಯುತ್ತಿದ್ದಂತೆ ಅವನಿಗೆ ಎಚ್ಚರವಾಗುತ್ತದೆ. ತಾಯಿ ಕೌಸಲ್ಯೆಯ ಬಳಿಗೆ ಓಡಿ ಬಂದು–

ನಮ್ಮಮ್ಮ ನೀ ಕೇಳೆ ನಿನ್ನೆ ಇರುಳು ಕನಸಿನಲಿ ।
ಕನ್ನಗಥರನ ಸತಿ ಬಂದು । ಮರ ತುಂಬ ।
ಹಣ್ಣು ಫಲಗಳನೆ ನೀಡಿದಳು ॥

–ಎಂದು ಕನಸನ್ನು ವಿವರಿಸುತ್ತಾನೆ. ಈ ಮಾತು ಕೇಳಿ ಕವುಸಲೆಗೆ ಆನಂದವಾಗುತ್ತದೆ; ಅವಳ ಮುಖ ಅರಳುತ್ತದೆ. "ಜನಕನ ಸುತೆ ಪ್ರಥಮವಾಗಿ ಋತುವಾದ ಸುದ್ದಿಯನ್ನು ತ್ವರಿತದಲ್ಲಿ ಕೇಳುತ್ತೀಯೆ'– ಎಂದು ಹೇಳುತ್ತಾಳೆ. ಈ ಭವಿಷ್ಯವಾಣಿ ರಾಮನಿಗೂ ಸಂತೋಷವನ್ನುಂಟು ಮಾಡುತ್ತದೆ.

ಒಂದು ದಿನ ಸೀತೆ ಗೆಳತಿಯರೊಂದಿಗೆ ಅಂದಣವನ್ನೇರಿ ವನಕ್ಕೆ ಬರುತ್ತಾಳೆ; ಅವರೊಂದಿಗೆ ಕೊಳದಲ್ಲಿ ಮೀಯುತ್ತಾಳೆ; ದಡಕ್ಕೆ ಬಂದು ಮಡಿಯುಟ್ಟು ಕಸ್ತೂರಿ ತಿಲಕವನ್ನು ಇಟ್ಟುಕೊಳ್ಳುತ್ತಾಳೆ; ಒಬ್ಬಟ್ಟು ಪಾಯಸ ಹಪ್ಪಳ ಸಂಡಿಗೆಗಳನ್ನು ತಿಂದು ನಲಿಯುತ್ತಾಳೆ; ಆಮೇಲೆ ಗೆಳತಿಯರೊಂದಿಗೆ ನಲಿದಾಡುತ್ತಾ ಹಣ್ಣುಗಳನ್ನು ಆಯಲು ಹೋಗುತ್ತಾಳೆ. ಹಣ್ಣುಗಳನ್ನು ಆಯುತ್ತಿದ್ದಾಗ, ಜಾನಕಿ, ಋತುಮತಿಯಾಗುತ್ತಾಳೆ. ಗೆಳತಿಯರು ಓಡಿ ಬಂದು ಅರಮನೆಗೆ ಸುದ್ದಿಮುಟ್ಟಿಸುತ್ತಾರೆ. ಜನಕ, ಅವಳನ್ನು ಮಂಗಳವಾದ್ಯಗಳೊಂದಿಗೆ ಅರಮನೆಗೆ ಕರೆಸಿಕೊಳ್ಳುತ್ತಾನೆ. ಅರಮನೆಯೊಳಗೆ ರಾಮನರಸಿಗೆ ಮುತ್ತಿನ ವಾಲೆ, ರತ್ನದ ಸರವಳಿ, ಪಚ್ಚೆಯ ಬಿಗಿದ ಪಾಂಬಸೆ– ಇವುಗಳಿಂದ ಅಲಂಕಾರ ಮಾಡುತ್ತಾರೆ. ಅನಂತರ ಪತ್ರಿಕೆ ಬರೆದು, ಸಾಕೇತಪುರಕ್ಕೆ ಜನಕ, ಚಾರರನ್ನು ಕಳಿಸುತ್ತಾನೆ. ದಶರಥ ಪತ್ರಿಕೆಯನ್ನೋದಿ, ಸತಿಯರಿಗೆ ತಿಳಿಸುತ್ತಾನೆ. ಅಯೋಧ್ಯೆಯ ಅರಮನೆಯಲ್ಲಿ ಸಂಭ್ರಮ ಮಿಗಿಲಾಗಿ ಮೆರೆಯುತ್ತದೆ.

## ಸನ್ಯಾಸಿಯಿಂದ ಸೀತೆಯ ಅಪಹರಣ :

ಜನಪದ ಕವಿಗಳು ಹೇಳುವ ಸೀತಾಪಹರಣದ ಕಥೆ ವಾಲ್ಮೀಕಿ ರಾಮಾಯಣದಂತೆಯೇ ಇದೆಯಾದರೂ ಮಧ್ಯೆ ಮಧ್ಯೆ ಕೆಲವು ಹೊಸ ಕಲ್ಪನೆಗಳನ್ನು ಮಾಡಿದ್ದಾರೆ.

ಸೀತಾ ರಾಮ ಲಕ್ಷ್ಮಣರು ಪಂಚವಟಿಯಲ್ಲಿದ್ದಾರೆ. ಒಂದು ದಿನ, ಲಕ್ಷ್ಮಣ ಗುಡಿಸಲಿನಲ್ಲಿ ಇಲ್ಲದ ಸಮಯ, ರಾಮ–ಸೀತೆಯರಿಬ್ಬರೂ ಗುಡಿಸಿಲಿನಲ್ಲಿ ಕುಳಿತು ಹಳೆಯದನ್ನೆಲ್ಲಾ ನೆನಪಿಸಿಕೊಳ್ಳುತ್ತಿದ್ದಾರೆ. ಆಗ ಅವರ ಎದುರಿಗೆ ಒಂದೆ ಚಂದವಾದ ಮೃಗ ಓಡಿ ಹೋಗುತ್ತದೆ. ಆ ಮೃಗ ತನಗೆ ಬೇಕು ಎನ್ನುತ್ತಾಳೆ ಸೀತೆ. ಅದು ಮಾಯಾವಿ ರಾಕ್ಷಸರ ತಾಣ ಎಂಬುದು ರಾಮನಿಗೆ ಗೊತ್ತು. ರಾಮ ಅದನ್ನು ತಿಳಿಸಿ, ಮೃಗದ ಆಸೆ ಬೇಡ ಎನುತ್ತಾನೆ. ಸೀತೆ–

ಒಡಹುಟ್ಟು ಎನಗಿಲ್ಲ ಒಡನೆ ಬಂಧುಗಳಿಲ್ಲ ।
ಮೊದಲ್ಯಾರು ಇಲ್ಲ ತನಗೀಗ । ಎನುತಲೆ ।
ಸುರಿಸಿದಳೆ ಕಣ್ಣ ಜಲಗಳ ॥

ಸೀತೆಯ ಕಣ್ಣುಗಳಲ್ಲಿ ಜಲ ತುಂಬಿದರೂ, ರಾಮ ಚಂಚಲಿತನಾಗಲಿಲ್ಲ. "ನಿನಗೆ ಛಲ ಬೇಡ.

(37 ನೇ ಪುಟ ನೋಡಿ)

# ಶಬರಿ

ಹೊಸಗನ್ನಡದ ನವೋದಯ ಕಾವ್ಯ ಮಾರ್ಗದ ಗಣ್ಯ ಕವಿಗಳಲ್ಲಿ ಸುಬ್ಬಣ್ಣ ರಂಗನಾಥ ಎಕುಂಡಿಯವರು ಒಬ್ಬರು. ಇವರದು ಅಭಿಜಾತವಾದ ಕವಿ ಪ್ರತಿಭೆ. ಇವರು ಆಂಗ್ಲ ಕವಿ ಕೀಟ್ಸ್‌ನಂತೆ ಪ್ರಾಚೀನಕಾಲದ ಹೊನ್ನಿನಂತಹ ಕಥೆಗಳನ್ನು ತಂದು ಸಾಲು-ಸಾಲಿನಲ್ಲಿಯೂ ವರ್ಣನೆಯನ್ನು ತುಂಬುತ್ತಾರೆ.

ಇವರ 'ಶಬರಿ' ಕಥನಕವನ ಚಂದನದ ಗೊಂಬೆಯಂತೆ ಚಿತ್ತಾಕರ್ಷಕವಾಗಿದೆ. ವ್ಯಕ್ತಿತ್ವದ ಕಲಾತ್ಮಕ ಕೆತ್ತನೆ, ಮುಗ್ಧ ಭಕ್ತಿಯ ಮಂದ ಗಂಧಕ್ಕೆ ಅದು ನೆಲೆಮನೆಯಾಗಿದೆ. ಶಬರಿ ರಾಮ ಭಕ್ತಳು. ರಾಮಧ್ಯಾನದಲ್ಲಿ ಬಾಲ್ಯ, ಯೌವನಗಳನ್ನು ದಾಟಿ ಮುಪ್ಪಿನ ಮಜಲಿಗೆ ಬಂದು ತಲುಪಿದ್ದಾಳೆ. ಅವಳ ಜೀವನ ರಾಮಮಯವಾಗಿ, ವಾತಾವರಣವನ್ನೆಲ್ಲಾ ರಾಮಮಯವಾಗಿ ಮಾಡಿಕೊಂಡಿದ್ದಾಳೆ. ರಾಮನಿಗಾಗಿ ಹಂಬಲಿಸಿ ಪರಿತಪಿಸಿ ಬುಗುರಿ ಹಣ್ಣುಗಳನ್ನು ಇಟ್ಟುಕೊಂಡು ಕಾದು ಕುಳಿತಿಹಳು. ರಾಮದರ್ಶನದ ವಿನಃ ಅವಳ ಘಟ ಗತಪ್ರಾಣವಾಗದು.

ಒಂದು ಬೆಳಗು 'ಚಿನ್ನದ ಬಿಂದಿಗೆ'ಯಂಥ ಸೂರ್ಯ ಮೂಡಲಕ್ಕೆ ಬಂದಿದ್ದಾನೆ. ಗಾಳಿ, ಬೀಸಿ ಬಂದು ಬೊಗಸೆ-ಬೊಗಸೆಯಾಗಿ ಮಂಜಿನ ಹನಿಗಳನ್ನು ತೂರುತ್ತಲಿದೆ. ಮೊಗ್ಗುಗಳು ಅರಳುತ್ತಿವೆ. ದುಂಬಿ ಹಾರಾಡುತ್ತಿವೆ. ನೇರಿಲ ಬಣ್ಣದ ಮೋಡ, ಕಣಿವೆಗೆ ಹೂ ಹಾರ ತೊಡಿಸಿದಂತೆ ಕೆಳಕ್ಕೆ ಬಾಗಿವೆ. ಹೂ ಬಿಸಿಲು ಹರಡಿದ್ದ ವನದಲ್ಲಿ ಚಿಗರಿ ಹಿಂಡು ಹಿಂಡಾಗಿ ಅಲೆಯುತ್ತಿವೆ. ಹಕ್ಕಿ ಮುಗಿಲಿಗೆ ಹಾರಿ ಚಿಲಿಪಿಲಿ ಹಾಡು ಹೇಳುತ್ತಿವೆ.

ಅಂದಿನದು ಮಂಗಳಕರವಾದ ಬೆಳಗೇ ಸರಿ. ಏಕೆಂದರೆ ಅಂದು ರಾಮ ಆ ಕಾಡಿಗೆ ಬರಲಿದ್ದ! ಅದಕ್ಕೆಂದೇ ಗಿಳಿಗಳ ಬಳಗ ರಾಮನನ್ನು ಹುಡುಕುತ್ತ ಆಕಾಶದಲ್ಲಿ ಅತ್ತಿತ್ತ ಹಾರಾಡುತ್ತಿವೆ! ಹಕ್ಕಿಯಿಂಚರದ ಸ್ವರೂಪದಲ್ಲಿ ಭಕ್ತಿಭಾವದಿಂದ ಗಿಡಮರ ತಂಬೂರಿ ನುಡಿಸುತ್ತ, ಶ್ರೀರಾಮಚಂದ್ರನಿಗೆ ಸ್ವಾಗತ ಬಯಸುತ್ತಿದೆ! ಇಂಥದೇ ಆದ ರಾಮನ ಹಂಬಲವನ್ನು ಎದೆಯಲ್ಲಿ ತುಂಬಿಕೊಂಡು, ಬುಟ್ಟಿಯನ್ನು ಹಿಡಿದುಕೊಂಡು ರಾಮಭಕ್ತೆಯಾದ ಶಬರಿ ಬುಗುರಿ ಹಣ್ಣಿನ ಕಾಡಿಗೆ ಮೆಲ್ಲನೆ ನಡೆದುಕೊಂಡು ಬರುತ್ತಾಳೆ.

ಮುಗ್ಧ ಹೃದಯದ ಶಬರಿ, ಎಂಜಲಿನ ಕಲ್ಪನೆಯೂ ಇಲ್ಲದೆ, ಶ್ರೀರಾಮನಿಗೆ ಅರ್ಪಿತವಾಗಬೇಕಾದ ಹಣ್ಣು ಅಧಿಕ ರುಚಿಪೂರ್ಣವಾಗಿರಬೇಕೆಂದು ಬಗೆದು, ಅದನ್ನು ಕಂಡುಕೊಳ್ಳಲೆಂದು, ಒಂದೊಂದು ಹಣ್ಣನ್ನೂ ರಾಮನಾಮದೊಡನೆ ರುಚಿ ನೋಡುತ್ತಾಳೆ. ಹುಳಿಯಾದುವುಗಳನ್ನು ಎಸೆದು, ಸಿಹಿಯಾದವುಗಳನ್ನು ಮಾತ್ರ ಬುಟ್ಟಿಗೆ ಸೇರಿಸಿಕೊಳ್ಳುತ್ತ, ರಾಮಸ್ಮರಣೆಯನ್ನು ಬಿಟ್ಟೂ ಬಿಡದೆ ಮಾಡುತ್ತ ಮುಂದುವರೆಯುತ್ತಾಳೆ. ಕಾಡಿಗೆ ಕಾಡೇ ಹರುಷಗೊಂಡು ರಾಮನಾಮವನ್ನು ಜಪಿಸುವಂತೆ ಮಾಡುತ್ತಾಳೆ!

ಕಾಡಿನ ಗಿಡಮರ ಎಲೆ ಹೂಗಳೆಲ್ಲ ರಾಮಸ್ಮರಣೆ ಮಾಡುವುದನ್ನು ಕಂಡು ಲಕ್ಷ್ಮಣ ಬೆರಗಾಗುತ್ತಿರುವಂತೆಯೇ, ಶ್ರೀರಾಮಚಂದ್ರ ಕಾಡನ್ನು ಪ್ರವೇಶಿಸುತ್ತಾನೆ. ಕಾಡಿನ ಶಬರಿಯ ಬಳಗದ, ಕರೆಯನ್ನು ಲಾಲಿಸಿ; ಶಬರಿಯ ಮೊರೆಯನ್ನು ಆಲಿಸಿ; ಶ್ರೀರಾಮನ ಆಗಮನವನ್ನು ಕಂಡು ಕಾಡಿಗೆ ಕಾಡೇ ಸಂತೋಷದಲ್ಲಿ ಮುಳುಗೇಳುತ್ತದೆ; ದಾರಿಯುದ್ದಕ್ಕೂ ಹೂ ಮಳೆಗರೆದು ಬನ ಅವನನ್ನು ಸ್ವಾಗತಿಸುತ್ತದೆ; ರಾಮನ ಬಿಲ್ಲು, ಮೇಘ ಮಾಲೆ, ಬನದ ಹಕ್ಕಿ, ಬಣ್ಣದ ನವಿಲು, ಚಿತ್ರವಿಚಿತ್ರ ಪತಂಗ, ಅಳಿಲು ಇವೆಲ್ಲ, ತಂತಮ್ಮ ಬಗೆಯಲ್ಲಿ, ಭಕ್ತಿಪೂರ್ವಕವಾಗಿ ಶ್ರೀರಾಮನನ್ನು ಬರಮಾಡಿಕೊಳ್ಳುತ್ತವೆ. "ಅದ್ಭುತವೀ ಪ್ರೇಮ" ಎಂದು ಲಕ್ಷ್ಮಣ ಬೆರಗಿನ ಉದ್ಗಾರ ತೆಗೆಯುವಂತೆ ಮಾಡುತ್ತವೆ.

ಶಬರಿಯ ಗುಡಿಸಲಿನ ಅಂಗಳಕ್ಕೇ ಶ್ರೀರಾಮಚಂದ್ರ ಕಾಲಿರಿಸುತ್ತಾನೆ! ನೀಲವರ್ಣದ ನಿಲವು. ಚಂದ್ರಬಿಂಬದಂಥ ಮುಖ, ತುಂಬು ಮುಗುಳ್ ನಗೆ, ಕಟ್ಟಿದ ಜಡೆಯಲ್ಲಿ ಮುಡಿದ ಹೂವು, ಹೆಗಲಲ್ಲಿ ಬಿಲ್ಲು, ಬತ್ತಳಿಗೆ, ವಲ್ಕಲದ ಬಟ್ಟೆಯ ಉಡುಗೆ, ನೀಲವಜ್ರದಂಥ ವಿಶಾಲ ವಕ್ಷದಲ್ಲಿ ಏರಿಳಿಯುವ ಹಾರ. ಒಟ್ಟಾರೆ, ಕಣ್ಮನಗಳನ್ನು ಹಿಡಿದು ನಿಲ್ಲಿಸುವ ಚೆಲುವಾದ ರೂಪ. ಶ್ರೀರಾಮನ-ರಾಮರೂಪ ನೋಡಿ ಸಂತೋಷಭರಿತಳಾದ ಶಬರಿ, ಅರ್ಘ್ಯ ಪಾದ್ಯ ನೀಡಿ, ಸತ್ಕರಿಸುತ್ತಾಳೆ ಬಡವಿಯಾದರೂ ಹೃದಯವಂತ ಭಕ್ತೆ ಆಕೆ. ಇದ್ದ ಹರಕು

**ಶ್ರೀಮತಿ ಎ.ಎಸ್. ಪಂಕಜ**

ಶಬರಿಯ ರಾಮಭಕ್ತಿಯನ್ನು ಕವಿ ಎಕ್ಕುಂಡಿಯವರು ಭಕ್ತರ ಹೃದಯ ತಂಪಾಗುವಂತೆ, ಪಾಠಕರ ಮನ ತಣಿದು ತುಂಬುವಂತೆ ಚಿತ್ರಿಸಿದ್ದಾರೆ:-

ರಾಮ ರಾಮ ಶ್ರೀರಾಮನ ಕರೆಯುತ ರಾಮನ ನೆನೆಸಿದಳು
ರಾಮ ರಾಮ ಶ್ರೀರಾಮನ ಧ್ಯಾನವ ಕಾಡಿಗೆ ಕಲಿಸಿದಳು.
ರಾಮ ರಾಮ ಶ್ರೀರಾಮ ಸ್ಮರಣೆಯಲಿ ಕಾಡನೆ ನಿಲಿಸಿದಳು
ರಾಮ ರಾಮ ಶ್ರೀರಾಮಗೆ ಹಲುಬುತ ಗಿಡ ಗಿಡ ನಡೆದಿಹಳು
ರಾಮ ರಾಮ ಶ್ರೀರಾಮನ ನೆನೆಯುತ ಬುಟ್ಟಿಯ ಹಿಡಿದಿಹಳು
ಕಾಡಿನ ಗಿಡಗಳ ಎಲೆಕೊಂಬೆಗಳು ರಾಮನ ಸ್ಮರಿಸಿದವು
ರಾಮ ರಾಮ ಶ್ರೀರಾಮನ ನೆನೆಯುತ ಹೂವನುದುರಿಸಿದವು
ರಾಮ ರಾಮ ಶ್ರೀರಾಮನಿಗಾಗಿಯೆ ಹಣ್ಣನು ಸುರಿಸಿದವು

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | | ಶುಕ್ರವಾರಗಳಲ್ಲಿ | |
|---|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ | ಪ್ರಾ 7–30 | ಪ್ರಾ 8–30 |
| | | | ಸಮರ್ಪಣ | ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | | ಪ್ರಾ 9–30 | ಪ್ರಾ 10–30 |
| *ಅರ್ಜಿತ ಕಲ್ಯಾಣೋತ್ಸವ | | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | | ರಾ 8–45 | ರಾ 9–00 |

| | |
|---|---|
| *ಅರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ಅರ್ಪಣೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಚಾಪೆಯನ್ನೆ ಹಾಸಿ, ಕುಳಿತುಕೊಳ್ಳಲು ಕೇಳಿಕೊಳ್ಳುತ್ತಾಳೆ. ಕುಳಿತ ರಾಮ-ಲಕ್ಷ್ಮಣರನ್ನು ಕಣ್ತುಂಬ ನೋಡಿ, ಸಂತಸದ ಕಂಬನಿಗೂಡಿ, ಕೈ ಮುಗಿದು, ನುಡಿಯುತ್ತಾಳೆ– ಆ ಹಣ್ಣುಗೂದಲಿನ ಶಬರಿ:

ಇಷ್ಟು ದಿವಸವು ಕಾದು
ಕುಳಿತೆವು ನೀವು ಬರುವಿರೆಂದು
ಇಷ್ಟು ದಿವಸ ಹಾರೈಸುತ್ತಿದ್ದೆವು
ನೀವು ಬರುವಿರೆಂದು
ಕಿವಿಯ ತುಂಬಿ ಬಂದವರು
ಬಂದಿರೊ, ಕಣ್ಣು ತುಂಬಿ ಇಂದು
ಮನವ ತುಂಬಿ ಬಂದವರು
ಬಂದಿರೊ, ವನವ ತುಂಬಿ ಇಂದು;
ಹೃದಯ ತುಂಬಿ ಬಂದವರು
ಬಂದಿರೊ, ಎದುರಿನಲ್ಲಿ ಇಂದು;

ಹೀಗೆ ತಾನು ಶ್ರೀರಾಮನಿಗಾಗಿ ಎಷ್ಟು ಪರಿತಪಿಸುತ್ತಿದ್ದೆ, ಆತನ ಬರವಿನಿಂದ ತನಗೆಂಥ ಆನಂದಾತಿರೇಕವಾಗಿದೆ ಎಂಬುದನ್ನು ಆಕೆ, ಮನಮುಟ್ಟುವಂತೆ, ಆಡಿ ತೋರಿಸುತ್ತಾಳೆ; ಮಾತ್ರವಲ್ಲ,

ತಿಳಿದ ಕಣ್ಣಿನಲಿ ಹೊಳೆದ ಬೆಳಕು
ಮೈ ತಳೆದು ಬಂದಿರೆಂದು
ಋಷಿಯ ಹರುಷರಸ ಮಂತ್ರರೂಪ
ಮೈ ತಳೆದು ಬಂದಿರೆಂದು
ನಿಮ್ಮ ಕರುಣೆಗಿಲ್ಲ ಅಂತಪಾರಗಳು
ಸ್ವಾಮಿ, ದೀನ ಬಂಧು
ರಾಮ ರಾಮ, ರಘುರಾಮ
ಶ್ರೀರಾಮ ರಾಮ

ಎಂದು ಶ್ರೀರಾಮನನ್ನು ಎದೆ ತುಂಬಿ ಕೊಂಡಾಡುತ್ತಾಳೆ, ಹಾಡಿ ಹೊಗಳುತ್ತಾಳೆ. ತನ್ನ ಭಕ್ತಿಯ ಕಾಣಿಕೆಯಾಗಿ, ತಾನು ಶ್ರಮಪಟ್ಟು ಆಯ್ದು, ರುಚಿ ನೋಡಿ ನೋಡಿ, ತಂದ ಹಣ್ಣುಗಳನ್ನು ಗೌರವಾದರದಿಂದ ನೀಡುತ್ತಾಳೆ. ಪ್ರೀತಿಯ ಪ್ರಪಂಚದಲ್ಲಿ 'ಎಂಜಲದ' ಮಾತಿಗ ಅವಕಾಶವೆಲ್ಲಿ? ಅದಕ್ಕೆಂದೇ,

ಭಕ್ತ ವತ್ಸಲನು ತಿಂದನೆಂಜಲನು
ಬುಟ್ಟಿ ತುಂಬ ಹಣ್ಣು,
ನೋಡುತಿತ್ತು ಹನಿಗೂಡುತಿತ್ತು
ಲಕ್ಷ್ಮಣನ ಬೆರಗುಗಣ್ಣು

(37 ನೇ ಪುಟ ನೋಡಿ)

# ಸಂಪಿಗೆ ಶ್ರೀನಿವಾಸದೇವರು

ತುಮಕೂರು ಜಿಲ್ಲೆಯ ತುರುವೇಕೆರೆ ತಾಲ್ಲೋಕ್ ಸಂಪಿಗೆ ಗ್ರಾಮದಲ್ಲಿ ಶ್ರೀ ಶ್ರೀನಿವಾಸದೇವರ ದೇವಸ್ಥಾನವಿದೆ. ಈ ಸಂಪಿಗೆ ಗ್ರಾಮವು ಹಿಂದೆ ಹಂಸಧ್ವಜ ರಾಜನ ಮಗನಾದ ಸುಧನ್ವ ರಾಜನ ರಾಜಧಾನಿಯಾಗಿ ಚಂಪಕನಗರವೆಂಬ ಹೆಸರಿನಿಂದ ಇದ್ದಿತೆಂದೂ ಹಾಗೂ ಈ ಸ್ಥಳವು ಅತ್ಯಂತ ಪುರಾತನವಾದುದೆಂದೂ ತಿಳಿದು ಬರುತ್ತದೆ. ಈ ಗ್ರಾಮದಲ್ಲಿ ಇನ್ನೂ ಅನೇಕ ಪುರಾತನ ದೇವಾಲಯಗಳು ಇವೆ.

ಹಿಂದೆ ಭಾಸ್ಕರನೆಂಬ ಬ್ರಾಹ್ಮಣನು ವ್ಯಾಸಋಷಿಯ ದರ್ಶನವನ್ನು ಪಡೆಯಬೇಕೆಂಬ ಇಚ್ಛೆಯುಳ್ಳವನಾಗಿ ಹೊರಟು ಅನೇಕ ಪುಣ್ಯತೀರ್ಥಗಳಲ್ಲಿ ಸ್ನಾನವನ್ನು ಮಾಡಿ, ಪುಣ್ಯಕ್ಷೇತ್ರಗಳ ದರ್ಶನವನ್ನು ಮಾಡಿ ಹಿಮಾಲಯ ಪರ್ವತದ ತಪ್ಪಲಿನಲ್ಲಿ ಚಿಂತಾಮಗ್ನನಾಗಿ ಕುಳಿತು ಋಷಿಯನ್ನು ಧ್ಯಾನಿಸುತ್ತಾ ಹಾಗೆಯೇ ಗಾಢನಿದ್ರೆಯನ್ನು ಮಾಡಲು ಸ್ವಪ್ನದಲ್ಲಿ ಆ ಋಷಿಯನ್ನು ಕಂಡನು. ಆ ಋಷಿಯು "ಅಯ್ಯಾ ಬ್ರಾಹ್ಮಣ ಶ್ರೇಷ್ಠನೇ. ನೀನು ಮಾಡಿರುವ ಪುಣ್ಯತೀರ್ಥಸ್ನಾನ ಮತ್ತು ಪುಣ್ಯಕ್ಷೇತ್ರಗಳ ಸೇವೆ, ನನ್ನಲ್ಲಿ ನಿನ್ನ ಅತಿಶಯವಾದ ಭಕ್ತಿ ಇವುಗಳಿಂದ ಸಂತೃಪ್ತನಾಗಿ ನಿನಗೆ ಕಾಣಿಸಿಕೊಂಡಿದ್ದೇನೆ. ನಿನ್ನ ಅಪೇಕ್ಷೆಗಳೇನೆಂಬುದನ್ನು ತಿಳಿಸು" ಎನ್ನಲು ಭಾಸ್ಕರನು ಬ್ರಾಹ್ಮಣನು "ಸ್ವಾಮಿಯೇ ನಾನು ಎಲ್ಲಿ ವಾಸಿಸುವುದರಿಂದ ಮತ್ತು ಯಾರನ್ನು ಸೇವಿಸುವುದರಿಂದ ನನಗೆ ಶ್ರೇಯಸ್ಸುಂಟಾಗುವುದು" ಎಂದು ಕೇಳಿದನು. ಆಗ ವ್ಯಾಸ ಋಷಿಗಳು ಒಂದು ಕಥೆಯನ್ನು ಹೇಳಿದರು.

"ಕರ್ನಾಟಕ ದೇಶದಲ್ಲಿ ಯಾಯವಾರ ಕುಲದಲ್ಲಿ ಹುಟ್ಟಿದ ವೇದವೇದಾಂಗ ಪಾರಂಗತನಾದ, ಹೆಂಡತಿ, ಮಕ್ಕಳು ಯಾರು ಇಲ್ಲದ ಮಾಧವನೆಂಬ ಬ್ರಾಹ್ಮಣನು ತೀರ್ಥ ಯಾತ್ರೆಗೆ ಹೊರಟನು. ಅವನು ಹೋಗುತ್ತಾ ದಾರಿಯಲ್ಲಿ ಕಾವೇರಿ ದಡದಲ್ಲಿರುವ ರಂಗನಾಥನನ್ನು ಸೇವಿಸಿ, ಅಲ್ಲಿಂದ ಹೊರಟು ಅಡವಿಯ ಒಂದು ಮಂಟಪದಲ್ಲಿ ರಾತ್ರಿಯನ್ನು ಕಳೆಯುತ್ತಿರಲು ಆ ಬ್ರಾಹ್ಮಣನಿಗೆ ಹೊಂಡದ ದಡದಲ್ಲಿ ಬೆಂಕಿಯಂತೆ ಪ್ರಕಾಶಿಸುತ್ತಿದ್ದ ಒಂದು ಹುತ್ತವು ಕಾಣಿಸಿಕೊಂಡಿತು. ಅದನ್ನು ಆಶ್ಚರ್ಯದಿಂದ ನೋಡುತ್ತಿರಲು ಹಾಗೆಯೇ ಆಕಾಶದಲ್ಲಿ ವೀಣೆ, ಮೃದಂಗ ವಾದ್ಯಗಳ ಧ್ವನಿಯೂ, ಸ್ತ್ರೀಯರ ಸಂಗೀತವೂ, ಕಾಲುಕಡಗಗಳ ಧ್ವನಿಯೂ ಕೇಳಿಬಂದವು. ಮತ್ತು ಹುತ್ತದ ಸುತ್ತಲೂ ದೇವತಾಸ್ತ್ರೀಯರು ಕಾಣಿಸಿಕೊಂಡು ಆ ಹುತ್ತವನ್ನು ಪುಷ್ಪ, ಫಲ, ಭಕ್ಷ್ಯಾದಿಗಳಿಂದ ಪೂಜಿಸಿ ನರ್ತನ, ಗಾನ ಮಾಡುತ್ತಾ ಸಮಸ್ತ ಸ್ತ್ರೀಯರು ಮಾಯವಾದರು. ಅದೇ ಕ್ಷಣದಲ್ಲಿ ನಾರದರು ಕಾಣಿಸಿಕೊಳ್ಳಲು ಬ್ರಾಹ್ಮಣನು ನಾರದರಿಗೆ ನಮಸ್ಕರಿಸಿ ಕೈ ಜೋಡಿಸಿ ನಿಂತನು. ಆಗ ನಾರದರು 'ಅಯ್ಯಾ ಬ್ರಾಹ್ಮಣನೇ ಈ ಹುತ್ತವು ರಾತ್ರಿಯಲ್ಲಿ ಅಗ್ನಿಗೆ ಸಮಾನವಾಗಿ ಕಾಣುತ್ತದೆ. ಈ ಹುತ್ತದಲ್ಲಿ ಶ್ರೀಹರಿಯು ನೆಲೆಸಿದ್ದಾನೆ. ಇದರಲ್ಲಿ ಶುಭಕರವೂ, ಮನೋಹರವೂ, ಕಾಂತಿಯುತವೂ ಆದ ಶ್ರೀ ಶ್ರೀನಿವಾಸದೇವರ ವಿಗ್ರಹವಿದೆ. ಈ ವಿಗ್ರಹದ ಪ್ರಭಾವಳಿಯಲ್ಲಿ ಎರಡು ಪಕ್ಕದಲ್ಲೂ ಅಮ್ಮನವರ ವಿಗ್ರಹಗಳಿವೆ. ಮತ್ತು ಮಂಗಳಮೂರ್ತಿಯಾದ ಈ ವಿಗ್ರಹವು ಪೀಠದಲ್ಲಿರುವ ಗರುಡನಿಂದ ವಹಿಸಲ್ಪಟ್ಟಿದೆ. ಈ ವಿಗ್ರಹದಲ್ಲಿ ಶ್ರೀ ವೆಂಕಟೇಶ್ವರ ಸ್ವಾಮಿಯ ದಿವ್ಯವಾದ ಕಳೆಯೂ ನೆಲೆಸಿದೆ. ಈ ವಿಗ್ರಹವು ಪೂರ್ವದಲ್ಲಿ ಹಂಸಧ್ವಜನ ಮಗನಾದ ಸುಧನ್ವನೆಂಬುವನಿಂದ ಪ್ರತಿದಿನವೂ ವಿಧವಿಧವಾದ ಉತ್ಸವಾದಿಗಳಿಂದ ಪೂಜಿಸಲ್ಪಟ್ಟಿದ್ದಾಗಿತ್ತು. ಈ ಪ್ರದೇಶದಲ್ಲಿ ಚಂಪಕನಗರವೆಂಬ ಪ್ರಸಿದ್ಧವಾದ ಸುಧನ್ವನ ಪಟ್ಟಣವಿತ್ತು. ಅದು ಕ್ರಮೇಣ ನಾಶವಾಗಿ ಆ ಪ್ರದೇಶವು ಕಾಡಾಯಿತು ಆ ವಿಗ್ರಹದ ಮೇಲೆ ದೊಡ್ಡ ಹುತ್ತವು ಕ್ರಿಮಿಗಳಿಂದ ನಿರ್ಮಿಸಲ್ಪಟ್ಟು ವಿಗ್ರಹವು ಭಿನ್ನವಾಗದೆ ಆಲಯದಲ್ಲಿರುವಂತೆ ಕಾಪಾಡಲ್ಪಟ್ಟಿದೆ. ಒಂದು ಹಸುವು ನಿತ್ಯವೂ ಬಂದು

ಶ್ರೀಮತಿ ಉಮಾ ಆರಾಧ್ಯ

ಕ್ಷೀರಧಾರೆಯಿಂದ ಈ ಹುತ್ತವನ್ನು ನೆನೆಸುತ್ತಿರುವುದು. ಈ ವಿಚಾರವು ಯಾರಿಗೂ ತಿಳಿಯದು. ಆದ್ದರಿಂದ ಹೀಗೆ ಹಸುವು ಕ್ಷೀರಾಭಿಷೇಕ ಮಾಡುತ್ತಿರುವುದನ್ನು ಜನರು ಕಂಡು ಆಶ್ಚರ್ಯಪಟ್ಟು ಗುಂಪು ಕೂಡಿ ಈ ಹುತ್ತದೊಳಗೆ ಏನಿದೆಯೋ ನೋಡಬೇಕೆಂದು ಈ ಹುತ್ತವನ್ನು ಅಗೆಯಲು ಪ್ರಯತ್ನಿಸುವವರೆವಿಗೂ ನೀನು ನಿಯತವ್ರತನಾಗಿ ಇಲ್ಲೇ ಇದ್ದುಕೊಂಡಿರು. ಪರಿಶುದ್ಧವಾದ ನೀರುಳ್ಳ ಈ ಹೊಂಡದಲ್ಲಿ ದಿನವೂ ಸ್ನಾನಮಾಡು, ಭಕ್ತರ ಗುಂಪು ಸೇರುವವರೆವಿಗೂ ಈ ಹುತ್ತವನ್ನು ಪೂಜಿಸುತ್ತಿರು. ಭಕ್ತರು ಸೇರಿದನಂತರ ಮೆಲ್ಲಗೆ ಈ ಹುತ್ತವನ್ನು ಅಗೆದು ಅಲ್ಲಿರುವ ದೇವತಾವಿಗ್ರಹಕ್ಕೆ ಮಂದಿರವನ್ನು ಮಾಡಿ ಉತ್ಸವಾದಿಗಳನ್ನು ನಡೆಸು. ಈ ಹೊಂಡವನ್ನು ಅಗೆದು ವಿಸ್ತಾರಪಡಿಸು. ಇಂದ್ರಿಯ ನಿಗ್ರಹವುಳ್ಳವನೂ, ಚಂಚಲಚಿತ್ತವಿಲ್ಲದವನೂ, ತಾಳ್ಮೆಯುಳ್ಳವನೂ ಆಗಿ ಕಂದಮೂಲ ಫಲಗಳನ್ನು ಭಕ್ಷಿಸುತ್ತಾ ಇದ್ದು, ಈ ಮೂರ್ತಿಯ ಸೇವೆಮಾಡುತ್ತಾ ಸಂತೋಷಚಿತ್ತನಾಗಿರು. ನೀನು ಕೊನೆಗೆ ಶ್ರೀಹರಿಯ ಪಾದಾರವಿಂದವನ್ನು ಪಡೆಯುವಿ. ಆದರೆ ಅರ್ಧರಾತ್ರಿಯಲ್ಲಿ ದೇವತಾಸ್ತ್ರೀಯರು ಇಲ್ಲಿಗೆ ಬರುವವರಾದುದರಿಂದ ಆ ಹೊತ್ತಿನಲ್ಲಿ ನೀನು ಇಲ್ಲಿ ನಿಲ್ಲಬೇಡ. ಈ ಪ್ರದೇಶವು ಯಕ್ಷ ಗಂಧರ್ವ, ದೇವರ್ಷಿಗಳಿಂದಲೂ, ಸುರಾಸುರರಿಂದಲೂ, ದೊಡ್ಡ ದೊಡ್ಡ ಹಾವುಗಳಿಂದಲೂ ಕೂಡಿ, ಸುಧನ್ವರಾಜನೇ ಮೊದಲಾದ ರಾಜರುಗಳಿಂದ ಅರ್ಚಿಸಲ್ಪಟ್ಟಿದೆ. ಈ ಪ್ರದೇಶದಲ್ಲಿ ಜಿಂಕೆಗಳು, ಮುತ್ತುಗದ ವನವೂ, ಅಲ್ಲಲ್ಲಿ ತುಳಸೀವನಗಳು ಇವೆ. ಆದುದರಿಂದ ಇದು ಪುಣ್ಯಸ್ಥಳವು. ಇಲ್ಲಿ ಶ್ರೀಹರಿ ಸಾನ್ನಿಧ್ಯವುಂಟು. ಇಲ್ಲಿ ಲಕ್ಷ್ಮೀಪತಿಯಾದ ಶ್ರೀನಿವಾಸ ಮೂರ್ತಿಯನ್ನು ನಾಲ್ಕು ವರ್ಣದವರೂ ಸೇವಿಸಿ ಪಾಪರಹಿತರಾಗುವರು. ಈ ಪ್ರದೇಶಕ್ಕೆ ಸಮೀಪದಲ್ಲಿ ಕೇಶವಮೂರ್ತಿ, ಈಶ್ವರ ಮತ್ತು ದೊಡ್ಡ ಆಕಾರದ ಆಂಜನೇಯ ವಿಗ್ರಹಗಳು, ಕೆರೆಯೂ ಇವೆ"

ಎಂದು ಹೇಳಿ ಆ ದೇವರ್ಷಿಯಾದ ನಾರದರು ಅರ್ಚನಾವಿಧಿಗಳನ್ನು ಬ್ರಾಹ್ಮಣನಿಗೆ ಉಪದೇಶ ಮಾಡಿ ಅಂತರ್ಧಾನನಾದರು. ಕೂಡಲೇ ಆಕಾಶದಿಂದ ಪುಷ್ಪವೃಷ್ಟಿ ಆಯಿತು. ಇಂತಹ ಆಶ್ಚರ್ಯ ವಿಷಯವನ್ನು ನಾರದರಿಂದ ಕೇಳಿ ಆಕಾಶದಿಂದ ಬಿದ್ದ ಪುಷ್ಪವೃಷ್ಟಿಯನ್ನು ನೋಡಿ ಬ್ರಾಹ್ಮಣನು ಬೆರಗಾದನು. ಅಷ್ಟರಲ್ಲೇ ಬೆಳಗಾಯಿತು. ಅನಂತರ ಜಾಗ್ರತೆಯಾಗಿ ಮೇಲಕ್ಕೆದ್ದು ಹಿಗ್ಗಿದ ಮನಸ್ಸುಳ್ಳವನಾಗಿ ಹೊಂಡದಲ್ಲಿದ್ದ ಶುದ್ಧವಾದ ನೀರಿನಲ್ಲಿ ಸ್ನಾನ ಮಾಡಿ ಪೂಜಾದ್ರವ್ಯಗಳನ್ನು ಹಿಡಿಗಿಸಿ ಕೊಳ್ಳಲು ವನದಲ್ಲೆಲ್ಲಾ ಸಂಚರಿಸಿದನು. ಆ ವನವು ಹೂಗಳಿಂದಲೂ, ಹಣ್ಣುಗಳಿಂದಲೂ ನಾನಾಬಗೆಯ ಮರಗಳಿಂದಲೂ ಬಳ್ಳಿಪೊದೆಗಳಿಂದಲೂ ಶೋಭಿಸುತ್ತಿತ್ತು. ಬಗೆಬಗೆಯಾದ ಹೂ, ಹಣ್ಣುಗಳನ್ನು ಬ್ರಾಹ್ಮಣನು ತಂದು ಸಂತೋಷದಿಂದ ಯಥಾವಿಧಿಯಾಗಿ ಆ ಹುತ್ತವನ್ನು ಪೂಜಿಸಿದನು. ಕ್ರಮೇಣ ಗೋಪಾಲಕರಾದ ಹುಡುಗರಿಂದ ಹಿಂಬಾಲಿಸಲ್ಪಟ್ಟು ಒಳ್ಳೆ ಲಕ್ಷಣಗಳುಳ್ಳ ಗೋವುಗಳು ಹಿಂಡು ಹಿಂಡಾಗಿ ಆ ವನಕ್ಕೆ ಬಂದು ಅಲ್ಲಲ್ಲಿ ಸಂಚರಿಸಿ ಮೇಯುತ್ತಾ ಬಂದವು. ಆ ಹಸುಗಳಲ್ಲಿ ಗಡಿಗೆಯಂತೆ ಕೆಚ್ಚಲುಳ್ಳ ಒಂದು ಹಸುವು ಆ ಹುತ್ತದ ಹತ್ತಿರಬಂದು ಕೆಚ್ಚಲಿನಿಂದ ಹುತ್ತದ ಮೇಲೆ ಹಾಲು ಸುರಿಸುತ್ತಾ ಆ ಹುತ್ತವನ್ನು ಮತ್ತೆ ಮತ್ತೆ ಮೂಸಿ ನೋಡುತ್ತಿತ್ತು. ಅಷ್ಟರಲ್ಲಿ ಒಬ್ಬ ಗೋಪಾಲಕನು ಹಸುವನ್ನು ಹುಡುಕುತ್ತ ಆ ಸ್ಥಳಕ್ಕೆ ಬಂದನು. ಹುತ್ತದ ಮೇಲೆ ಹಾಲು ಸುರಿಸುತ್ತಿರುವ ಆ ಹಸುವನ್ನು ಕಂಡನು. ಬೇರೆ ಗೋಪಾಲಕರನ್ನು ಕೂಗಿ ಕರೆದನು. ಅವರೆಲ್ಲರೂ ಆ ಹಸುವನ್ನು ಮತ್ತು ಆ ಹುತ್ತಕ್ಕೆ ಪೂಜೆಮಾಡಿರುವುದನ್ನು, ಬ್ರಾಹ್ಮಣನನ್ನು ಕಂಡು ಆಶ್ಚರ್ಯಪಟ್ಟನು. ಬ್ರಾಹ್ಮಣರು ಆ ಗೋಪಾಲಕರಿಗೆ ಹೂ, ಹಣ್ಣುಗಳನ್ನು ಕೊಟ್ಟನು. ಅದು ಮೊದಲ್ಗೊಂಡು ಗೋಪಾಲಕರು ಆ ಬ್ರಾಹ್ಮಣನು ಮಾಡುತ್ತಿದ್ದ ಪೂಜೆಯನ್ನು, ಹುತ್ತದ ಮೇಲೆ ಹಾಲು ಸುರಿಸುತ್ತಿದ್ದ ಹಸುವನ್ನು ನೋಡಲು ಬರುತ್ತಿದ್ದರು. ಮತ್ತು ಹೂ, ಹಣ್ಣು, ಹಾಲು, ತುಪ್ಪ, ಮೊಸರು, ಜೇನು ಇವುಗಳನ್ನು ಸಂತೋಷದಿಂದ ತಂದು ಒಪ್ಪಿಸುತ್ತಿದ್ದರು. ಕ್ರಮೇಣ ಕೆಲವು ದಿನಗಳಲ್ಲಿ ಸುತ್ತಮುತ್ತಲಿದ್ದ ಹಳ್ಳಿಗಳಿಂದ ವೃದ್ಧರ, ... ತರುಣರೂ, ಹೆಂಗಸರೂ, ಹು... ಗುಂಪು ಗುಂಪಾಗಿ ಬರುತ್ತಿದ್ದರು.

"ಒಂದು ದಿನ ಮಹಾಭಕ್ತರುಗಳ ಪ್ರಾರ್ಥನೆಯ ಮೇರೆಗೆ ಆ ಬ್ರಾಹ್ಮಣನು ಹುತ್ತವು ಕರಗಿಹೋಗುವಂತೆ ಹುತ್ತದ ಮೇಲೆ ಒಂದೇ ಗೋಧಾರೆಯಾಗಿ ನೀರು ಸುರಿಸಿದನು. ಹುತ್ತದ ಮಣ್ಣೆಲ್ಲಾ ಕರಗಿ ಕೊಚ್ಚಿಹೋಗಲು ಒಳಗಿದ್ದ ಶ್ರೀನಿವಾಸ ವಿಗ್ರಹವು ಕಂಡುಬಂದಿತು. ದೇವ ದುಂದುಭಿಗಳು ಮೊಳಗಿದವು. ಆಕಾಶದಿಂದ ಪುಷ್ಪವೃಷ್ಟಿಯಾಯಿತು. ಆ ಮಹಾದಾಶ್ಚರ್ಯವನ್ನು ಕಂಡು ಜನಗಳು 'ನಾವು ಧನ್ಯರು' ಎಂದು ಕೂಗಿಕೊಳ್ಳುತ್ತಾ ಕುಣಿದಾಡಿದರು. ನಾರದರಿಂದ ತಿಳಿದಂತೆ ಇದ್ದ ಆ ದಿವ್ಯಮಂಗಳ ವಿಗ್ರಹವನ್ನು ಬ್ರಾಹ್ಮಣನು ಮತ್ತು ಜನಗಳು ನೋಡಿ ಅಪಾರವಾದ ಸಂತೋಷವನ್ನು ಹೊಂದಿದರು. ಆದರೆ ದಿನವೂ ಬಂದು ಹಾಲು ಸುರಿಸುತ್ತಲಿದ್ದ ಹಸುವು ಬರದೇ ನಿಂತಿತು.

"ಕಾಲಾನಂತರ ಎಲ್ಲರೂ ಒಟ್ಟುಗೂಡಿ ಬೇಗನೆ ಅಲ್ಲಿ ಒಂದು ಮಂಟಪವನ್ನು ಕಟ್ಟಿ ಅದಕ್ಕೆ ಬಾಗಿಲು ಸಹಮಾಡಿದರು. ಅನಂತರ ನಾರದರ ಮಾತಿನಂತೆ ಆ ಹೊಂಡವನ್ನು ವಿಸ್ತಾರ ಮಾಡಬೇಕೆಂದು ಮಾಧವನು ಅಗೆಯುತ್ತಿರಲು ಲೋಹ ನಿರ್ಮಿತವಾದ ಶ್ರೀನಿವಾಸ ವಿಗ್ರಹವು, ಅಮ್ಮನವರ ಎರಡು ವಿಗ್ರಹಗಳೊಂದಿಗೆ ಆತನಿಗೆ ದೊರೆಯಿತು. ಅವುಗಳನ್ನೇ ಉತ್ಸವವಿಗ್ರಹಗಳನ್ನಾಗಿ ತಿಳಿದು ತಾನು ಕಟ್ಟಿಸಿದ ಮಂಟಪದಲ್ಲಿ ಅವು

ಗಳನ್ನು ಪ್ರತಿಷ್ಠಿಸಿ ವಿವಿಧ ಅರ್ಚನೆಗಳಿಂದಲೂ ಸ್ತೋತ್ರಗಳಿಂದಲೂ, ಉಪಚಾರಗಳಿಂದಲೂ, ಮಹೋತ್ಸವಗಳಿಂದಲೂ, ಪ್ರತಿದಿನವೂ ಭಕ್ತಿಯಿಂದ ಶ್ರೀನಿವಾಸನನ್ನು ಅರ್ಚಿಸುತ್ತಿದ್ದನು ತದನಂತರ ಸುತ್ತಮುತ್ತ ಪ್ರದೇಶಗಳಿಂದ ಭಕ್ತರು ಬರಹತ್ತಿದರು. ಶ್ರೀನಿವಾಸನನ್ನು ಸೇವಿಸಿ ತಮ್ಮ ತಮ್ಮ ಇಷ್ಟಾರ್ಥಗಳನ್ನು ಪಡೆದು ಧನ್ಯರಾಗುತ್ತಿದ್ದರು.

"ಪ್ರತಿ ವೈಶಾಖಮಾಸದಲ್ಲೂ ದಿವ್ಯವಾದ ರಥೋತ್ಸವಾದಿಗಳನ್ನು ಮಾಡುತ್ತಿದ್ದರು. ಈ ವೃತ್ತಾಂತವು ಸುತ್ತಲೂ ಹರಡಿತು. ಆ ಪ್ರದೇಶ ಸಂಪಿಗೆಗ್ರಾಮವೆಂದು ಪ್ರಸಿದ್ಧವಾಯಿತು. ಅಲ್ಲಿ ಪೂರ್ವದಲ್ಲಿ ಚಂಡರ ನಗರವಿತ್ತು.

"ಹಿಂದಾನೊಂದು ಕಾಲದಲ್ಲಿ ಭಾರ್ಗವನೆಂಬ ಬ್ರಾಹ್ಮಣನು ಕಾಶಿಗೆ ಹೋಗಿ ಶಿವ-ಪಾರ್ವತಿಯನ್ನು ಸೇವಿಸಿ ಅಲ್ಲಿಂದ ಒಂದು ಬಿಲ್ವಪತ್ರೆಸಸಿಯನ್ನು ತೆಗೆದುಕೊಂಡು ಕಾಲುನಡಿಗೆಯಲ್ಲಿ ಹಿಂತಿರುಗಿ ಬರುತ್ತಾ ದಾರಿಯಲ್ಲಿ ಸಂಪಿಗೆಗ್ರಾಮವನ್ನು ಸೇರಿದನು. ಆಗ ಅಲ್ಲಿ ನಡೆಯುತ್ತಿದ್ದ ಶ್ರೀನಿವಾಸದೇವರ ರಥೋತ್ಸವವನ್ನು ಹಗಲು ರಾತ್ರಿ ನೋಡಿದನು. ದೇವಸ್ಥಾನದ ಎಡಗಡೆಯಲ್ಲಿ ಪ್ರಾಕಾರದೊಳಗೆ ಯಾರಿಗೂ ಕಾಣದೆ ಬಳಿಯಲ್ಲಿ ಬಿಲ್ವಪತ್ರೆಸಸಿಯನ್ನಿಟ್ಟನು. ಮಾರನೆ ದಿನ ತೀರ್ಥಸ್ನಾನಾದಿಗಳನ್ನು ಮುಗಿಸಿ ಭಾರ್ಗವನು ಊರಿಗೆ ಹೊರಟು ಆ ಬಿಲ್ವಪತ್ರೆಸಸಿಯನ್ನು ಕಿತ್ತುನೋಡಿ ಬರದೇ ಇರಲು ಚೆನ್ನಾಗಿ ಬೇರು ಬಿಟ್ಟಿರುವುದೆಂದು ತಿಳಿದು ಸಸಿಯನ್ನು ಅಲ್ಲಿಯೇ ಬಿಟ್ಟು ಶ್ರೀಹರಿಯನ್ನು ಸ್ಮರಿಸುತ್ತಾ ಹೊರಟು ಹೋದನು. ಆ ಸಸಿಯು ಅದೇ ಸ್ಥಳದಲ್ಲಿ ಸ್ವಲ್ಪ ದಿನಗಳಲ್ಲಿಯೇ ಮರವಾಯಿತು. ಆ ಬಿಲ್ವವೃಕ್ಷದಲ್ಲಿ ಶ್ರೀ ಲಕ್ಷ್ಮಿಯು ಅನಪಾಯಿನಿಯಾಗಿ ವಾಸಮಾಡುತ್ತಲಿದ್ದಾಳೆ.

"ದೇವಸ್ಥಾನಕ್ಕೆ ಪೂರ್ವದಿಕ್ಕಿನಲ್ಲಿ ಕೊಂಚದೂರದಲ್ಲಿ ಬೋರೆಯ ಮೇಲೆ ಎರಡು ಬೇವಿನ ಮರಗಳಿವೆ. ಅವುಗಳ ಎಲೆಗಳು ಸಿಹಿಯಾಗಿರುವುವು. ಆ ಮರದ ಬಳಿಯಲ್ಲಿ ಮುಂಗಾರಿನಲ್ಲಿ ಬಿದ್ದ ನೀರು ಎಣ್ಣೆಯಂತೆ ಕಾಣುವುದು. ಆವರೆ ಬಹುಕಾಲಕ್ಕೆ ಬಿಲ್ವವೃಕ್ಷವೂ ಬೇವಿನ ಮರಗಳೂ ನಾಶವಾಗುವವು. ಪೂರ್ವದಲ್ಲಿ ಸುಧನ್ವನ ಕಾಲದಲ್ಲಿ ಶ್ರೀನಿವಾಸ ಮಹೋತ್ಸವವು ಹೇಗೆ ನಡೆಯುತ್ತಿತ್ತೋ ಹಾಗೆಯೇ ಮುಂದೆ ಹಿಂದಾನೊಂದು ಕಾಲಕ್ಕೆ ಉತ್ಸವವು ವಿಜೃಂಭಣೆಯಿಂದ ನಡೆಯುವುದು. ಯಾರು ಈ ಶ್ರೀನಿವಾಸನ ಕ್ಷೇತ್ರಮಹಿಮೆಯನ್ನು ಕೇಳುತ್ತಾರೋ, ಮತ್ತು ಕೇಳಿಸುತ್ತಾರೋ ಅವರು ಧನ್ಯರು. ಅವರಿಗೆ ಶ್ರೀನಿವಾಸನು ಸಂತುಷ್ಟನಾಗಿ ಅಪೇಕ್ಷಿಸಿದ್ದನ್ನು ಕೊಡುವನು. ಆದ್ದರಿಂದ ಭಾಸ್ಕರನೇ! ಆ ಶ್ರೀನಿವಾಸ ಕ್ಷೇತ್ರಕ್ಕೆ ಇಲ್ಲಿಂದ ಹೊರಡು, ಅಲ್ಲಿ ನಿರಾಳವಾದ ಮನಸ್ಸುಳ್ಳವನಾಗಿ ಶ್ರೀನಿವಾಸನ ಕೈಂಕರ್ಯವನ್ನು ಮಾಡುತ್ತ ಶಿಷ್ಯರುಗಳಿಂದೊಡಗೂಡಿ ಯಾವಜ್ಜೀವವೂ ವಾಸಮಾಡು. ದೇಹಾವಸಾನ ಸಮಯದಲ್ಲಿ ನಾನು ಹೇಳಿರುವುದೆಲ್ಲವನ್ನೂ ಸ್ಮರಿಸಿಕೊಂಡು ಒಬ್ಬ ಶಿಷ್ಯನಿಗೆ ಹೇಳಿ ನಂತರ ಪರಮಪದವನ್ನು ಹೊಂದು, ಆ ಶಿಷ್ಯನು ನಿನ್ನ ಅನುಗ್ರಹದ ದೆಸೆಯಿಂದ ಶ್ರೀನಿವಾಸನ ಕ್ಷೇತ್ರ ಮಹಾತ್ಮೆಯನ್ನು ನೀನು ಹೇಳಿದಂತೆ ಕೊಂಚವೂ ಲೋಪಮಾಡದೆ ಗ್ರಂಥರೂಪದಲ್ಲಿ ಬರೆಯುವನು. ಈ ಲೋಕದಲ್ಲಿ ಆ ಕ್ಷೇತ್ರ ಮಹಾತ್ಮೆಯು ಸೂರ್ಯಚಂದ್ರರಿರುವವರೆಗೂ ಶ್ರೀನಿವಾಸಾನುಗ್ರಹದಿಂದ ಸ್ಥಿರವಾಗಿಯೂ, ಪ್ರಸಿದ್ಧವಾಗಿಯೂ ಇರಲಿ. ನಿನಗೆ ಶುಭವಾಗಲಿ, ನಾಳೆ ಬೆಳಗ್ಗೆ ಆ ಕ್ಷೇತ್ರಕ್ಕೆ ಜಾಗ್ರತೆ ಹೋಗು'' ಎಂದು ಹೇಳಿ ವ್ಯಾಸರು ಅಂತರ್ಧಾನರಾದರು.

ಬ್ರಾಹ್ಮಣನು ಎಚ್ಚೆತ್ತು ಎಂತಹ ಸುಂದರ ಸ್ವಪ್ನ. ಆ ಸ್ಥಳವು ಎಲ್ಲಿರುವುದೆಂದು ಹುಡುಕುತ್ತ ಆ ಹಿಮವತ್ ಪರ್ವತದ ತಪ್ಪಲಿನಿಂದ ದಕ್ಷಿಣಾಭಿಮುಖನಾಗಿ ಹೊರಟು ಕೆಲವು ದಿನಗಳಲ್ಲಿ ಒಬ್ಬ ವೃದ್ಧಬ್ರಾಹ್ಮಣನನ್ನು ಕಂಡನು. ಆತನು ಕಪ್ಪಾಜಿನವನ್ನು ಧರಿಸಿದವನಾಗಿದ್ದನು. ಅವರಿಗೆ ನಮಸ್ಕರಿಸಿದನು. ಆಗ ಆ ವೃದ್ಧಬ್ರಾಹ್ಮಣನು "ವ್ಯಾಸರಿಂದ ನೀನು ಕೇಳಿ ತಿಳಿದುಕೊಂಡ ಕ್ಷೇತ್ರವು ಅದೋ ನೋಡು ಅಲ್ಲಿ ಕಾಣುತ್ತಿದೆ. ಅಲ್ಲಿಗೆ ಹೋಗು ಸುಖಿಯಾಗು, ಅಲ್ಲಿಯೇ ನಿನಗೊಬ್ಬ ಶಿಷ್ಯನು ದೊರಕುವನು" ಎಂದು ಹೇಳಿ ಮಾಯವಾದನು. ಭಾಸ್ಕರನು ಅಲ್ಲಿಂದ ಹೊರಟು ಸಂಪಿಗೆಗ್ರಾಮವನ್ನು ತಲುಪಿ ಶ್ರೀನಿವಾಸನ ದರ್ಶನವನ್ನು ಮಾಡಿ, ಆ ದಿನವನ್ನು ಅಲ್ಲಿಯೇ ಕಳೆದು ಶ್ರೀನಿವಾಸನ ಸೇವಾಲಯದಲ್ಲಿ ಶಿಷ್ಯನನ್ನು ನಿರೀಕ್ಷಿಸುತ್ತಿದ್ದನು. ಸ್ವಲ್ಪ ದಿನಗಳಲ್ಲಿ ಶಿಷ್ಯನುದೊರಕಿ ಭಾಸ್ಕರನೊಂದಿಗೆ ಸೇರಿ, ಅವನ ಪಾದಸೇವೆ ಮಾಡುತ್ತಾ ಸಮಸ್ತ ವಿಷಯಗಳನ್ನು ತಿಳಿದುಕೊಂಡನು. ಕಾಲಾನಂತರ ಭಾಸ್ಕರನು ಪರಮಪದವನ್ನು ಹೊಂದಿದನು.

ಭಾಸ್ಕರನೆಂಬ ಬ್ರಾಹ್ಮಣನ ಅಪ್ಪಣೆಯಂತೆ ಅನೇಕ ಅರ್ಥವುಳ್ಳ, ಪಾಪನಾಶಕವಾದ ಚಿತ್ತಾಕ್ಷರಗಳುಳ್ಳ ಮನೋಹರವಾದ ಸಂಪಿಗೆ ಸ್ಥಳದ ಮಹಾತ್ಮೆಯು ಭಾಸ್ಕರನ ಶಿಷ್ಯನಿಂದ ರಚಿಸಲ್ಪಟ್ಟಿತು.

ಸಂಪಿಗೆಗಾಮದಲ್ಲಿ ಈಗಲೂ ಕಹಿಬೇವು, ಸಿಹಿಬೇವು ಮರಗಳಿದ್ದ ಜಾಗದಲ್ಲಿಯೂ, ಸುಧನ್ವನು ತಂದೆಯಿಂದ ಕಾದ ಎಣ್ಣೆಯಲ್ಲಿ ಹಾಕಲ್ಪಟ್ಟ ಜಾಗದಲ್ಲಿಯೂ ಹುಲ್ಲು ಬೆಳೆದಿಲ್ಲ. ಅಲ್ಲಿ ಭೂತಪ್ಪನ ಗುಡಿಯೊಂದು ಈಗಲೂ ಇದೆ.

ಪ್ರತಿವರ್ಷವೂ ವೈಶಾಖ ಮಾಸದ ಮೇ ತಿಂಗಳಲ್ಲಿ ರಥೋತ್ಸವವೂ, ಬ್ರಹ್ಮೋತ್ಸವವು ನಡೆಯುತ್ತಾ ಇದೆ.

ಈ ದೇವಸ್ಥಾನದಲ್ಲಿ ಬರುವ ಯಾತ್ರಿಕರಿಗೆ ತಂಗಲು ಕೊಠಡಿಗಳು ಮತ್ತು ಮದುವೆ, ಮುಂಜಿಗಳಿಗೆ ಸ್ಥಳಾವಕಾಶವಿದೆ.



(10 ನೇ ಪುಟದಿಂದ)

ಎನ್ನೆಂದುದಂ ಮಾಡು, ನನ್ನ ವಕ್ಷದಿಂದ ಎಳೆದು ತೆಗೆ ಈ ರಾಮಬಾಣವನ್ನು ಎನ್ನುತ್ತಾನೆ. ಪತಿಯಾಣತಿಗೆ ಪ್ರತಿನುಡಿಯಲಾರದಾ ಪತಿವ್ರತೆ ಮಂಡೋದರಿ, ಆ ಮಹಾಬಾಣವನ್ನು ಕಿತ್ತು ತೆಗೆಯುತ್ತಾಳೆ. ತೆಗೆದುದೆ ತಡ, ರಕ್ತದ ಓಕುಳಿ ಬಗ್ಗ ಉಕ್ಕಿ ರಾವಣ ಪ್ರಾಣವನ್ನು ಹೀರಿ ರಾಮನ ಆತ್ಮದಲ್ಲಿ ಮೋಕ್ಷ ಪಡೆಯುತ್ತದೆ. 'ಮಹಾಸತಿ ಮಂಡೋದರಿ ಪತಿಪಾದ ಮೂಲದೊಳೆ ಪಟ್ಟು, ಪೊಂದಿದಳಿರುಳೆ ಇಚ್ಛೆಸಾವಂ ಧನ್ಯೆ, ಪುಣ್ಯಾತ್ಮೆ, ಮಾತಾಯಿ, ಹದಿಬದೆಯರರಸಿ ಎಂದು ಎಲ್ಲರೂ ಕೊಂಡಾಡುತ್ತಿರಲು,' ಮಂಡೋದರಿಯ ಭೌತಿಕ ದೇಹ ರಾವಣನ ಕಳೇಬರದೊಡನೆ ಶ್ವೇತ ಭಸ್ಮಾವಶೇಷವಾಗುತ್ತದೆ, ಅವಳ ಧವಳ ಕೀರ್ತಿಯಂತೆ.

ಹೀಗೆ 'ಶ್ರೀರಾಮಾಯಣದರ್ಶನಂ' ದಲ್ಲಿ ಚಿತ್ರಿತಳಾಗಿರುವ ಮಂಡೋದರಿ ಮಹಾ ಪತಿವ್ರತೆಯಾಗಿದ್ದಾಳೆ. "ಹದಿಬದೆತನಕೆ ಮೀರ್ವ ಸಾಧನೆಯಿಲ್ಲ" ಎನ್ನುವುದು ಅವಳ ಬಾಳಿನ ಸೂತ್ರ ಮಂತ್ರ. ಅದನ್ನಾಧರಿಸಿ ಅರಳಿದೆ ಅವಳ ಪುಣ್ಯ ಜೀವನ, ಉದಾತ್ತ ವ್ಯಕ್ತಿತ್ವ. ಪತಿಯ ಶ್ರೀಚರಣಗಳಲ್ಲಿ ತನ್ನ ತನು ಮನ ಹೃದಯಗಳನ್ನು ಅರ್ಪಿಸಿದ್ದರೂ, ತನ್ನ ಜೀವನವನ್ನೆ ಅವನ ಅತ್ಯೋನ್ನತಿಗೆ ಮುಡಿಪಾಗಿಸಿದ್ದರೂ, ತನ್ನತನವನ್ನವಳು ಕಳೆದುಕೊಂಡಿಲ್ಲ. ಪತಿವ್ರತೆಯ ಗುರಿ ಕೇವಲ ಪತಿಯ ಸೇವೆಗೈವುದೊಂದೆ ಅಲ್ಲ. ಅವನ ಅತ್ಯೋದ್ಧಾರಕ್ಕೆ ಶ್ರಮಿಸುವುದು. ಎಂದುನಂಬಿ ನಡೆಯುತ್ತಿರುವವಳು. ಪತಿವ್ರತಾಶಕ್ತಿಯಲ್ಲಿ ಮಂಡೋದರಿಗೆ ಅಪಾರ ನಂಬಿಕೆ. "ಹದಿಬದೆಯ ಹೃದಯದುರಿ ಲಂಕೆಯಂ ದಹಿಸದೆ" ಎಂದವಳು ಶಂಕಿಸಿದಾಗ ರಾವಣ ಅವಳ ಮಾತುಗಳನ್ನು "ಪುಸಿಮನೆಗೆ ಪುಸಿಗೋಡೆ" ಎಂದು ಜರೆಯುತ್ತಾನೆ.

ಶ್ರೀರಾಮಚಂದ್ರನೂ ಸಹ ಯುದ್ಧಭೂಮಿಯಲ್ಲಿ, ರಾವಣನನ್ನು ಎದುರಿಸುತ್ತ ಇವನನ್ನು ಸೋಲಿಸುವುದು ಅಷ್ಟು ಸುಲಭವಲ್ಲ, ಪತಿವ್ರತಾ ಸತಿಯಿರ್ಪಳವನಿಗೆ ಎನ್ನುತ್ತಾನೆ. ಮಂಡೋದರಿಯ ಪತಿವ್ರತಾಧರ್ಮ ರಾವಣನನ್ನು ವಜ್ರ ಕವಚದಂತೆ ರಕ್ಷಿಸುತ್ತಿತ್ತು.

ಕುಲಧರ್ಮ ಪತ್ನಿಯ ಸದ್ಗುಣಗಳನ್ನೆಲ್ಲ ಮೈಗೂಡಿಸಿಕೊಂಡ ಮಹಾಸತಿ ಮಂಡೋದರಿ. ಅವಳು ಪತಿಗೆ ಚರಣದಾಸಿಯೂ ಹೌದು. ಪರಮ ಗುರುವೂ ಹೌದು. ರಾವಣನ ಅವಗುಣಗಳನ್ನೆಲ್ಲ ಕ್ಷಮಿಸಿಯೂ ಅವನನ್ನು ಅಗಾಧವಾಗಿ ಪ್ರೇಮಿಸುವ, ಸದಾಕಾಲದಲ್ಲೂ ಅವನ ಆತ್ಮೋದ್ಧಾರಕ್ಕಾಗಿ ಸರ್ವಪ್ರಯತ್ನ ಮಾಡುವ ಪತಿ ಹಿತೈಷಿಣಿ ಅವಳು. ರಾವಣನ ವಿಜಯಕ್ಕೆ, ಸಾಧನೆಗೆ ಹಿರಿಮೆಗೆ ಮಂಡೋದರಿಯೇ ಕಾರಣ. ಅವಳ ಪ್ರೇಮ ಚೈತನ್ಯ, ತಪಶ್ಶಕ್ತಿ, ರಾವಣನ ಅವಗುಣಗಳ ಕಾಳಿಕೆಯನ್ನು ಕಳೆದು, ಅವನ ಆತ್ಮೋದ್ಧಾರದಲ್ಲಿ ನೆರವಾಗುತ್ತದೆ. ರಾವಣನ ಹೃದಯಕ್ಕೆ ತಟ್ಟುವಂತೆ, ಲೋಕದ ಪತಿವ್ರತೆಯರೆಲ್ಲರ ಅಂತರಂಗದ ಭಾವನೆಗಳಿಗೆ ವ್ಯಕ್ತಿರೂಪ ಕೊಟ್ಟಂತೆ, ಶಾಶ್ವತ ಧರ್ಮದ ತಿರುಳನ್ನು ಬೋಧಿಸುವಂತೆ, ಗಾಂಭೀರ್ಯ, ದೈನ್ಯಗಳಿಂದ ಪತಿಗೆ ಕಾಂತಾ ಸಮ್ಮಿತಿಯಿಂದ ಹಿತವಚನಗಳನ್ನು ಹೇಳುತ್ತಾಳೆ.

ರಾವಣ ಮಂಡೋದರಿಯರ ನಡುವೆ ಅನನ್ಯ ಪ್ರೇಮವಿದೆ. ರಾವಣನು ಇಂದ್ರವಿಜಯಿಯಾದರೂ ಇಂದ್ರಿಯ ವಿಜಯಿಯಾಗಿಲ್ಲ. ಪತಿಯ ಈ ದೌರ್ಬಲ್ಯದ ಅರಿವು ಮಂಡೋದರಿಗಿದೆ. ಆದರೂ ಅವನನ್ನು ತಿರಸ್ಕರಿಸದೆ, ತನ್ನ ಹೃದಯಾಂತರಾಳದ ಪ್ರೇಮವನ್ನೆಲ್ಲ ಅವನಡಿಗಳಲ್ಲಿ ಧಾರೆಯೆರೆಯುತ್ತಾಳೆ. ರಾವಣನೂ ಹುಟ್ಟುವಾಗಲೆ ರಕ್ತಗತವಾಗಿ ಬಂದ ಪೆಣ್ಬಡಲಿನಾಸೆಯ ದೌರ್ಬಲ್ಯದಿಂದ ಬೇರೆಹೆಣ್ಣುಗಳನ್ನು ಬಯಸಿದರೂ ಮಂಡೋದರಿಯನ್ನು ಗಾಢವಾಗಿ ಪ್ರೇಮಿಸುತ್ತಾನೆ. ಆರಾಧಿಸುತ್ತಾನೆ. ಅವಳ ಸದ್ಗುಣಗಳ ಮೌಲ್ಯವನ್ನವನು ಬಲ್ಲನು. 'ನೀನೆನಗೆ ಶಾಂತಿ ಸತ್ತ್ವಮಾತ್ಮಂ, ನೀನೆನಗೆ ತುತ್ತತುದಿಯಾಸೆ, ನೆಲೆನೆಚ್ಚು ಸೈಪು, ದೇವನೆ ಪೇಸಿ ಬಿಟ್ಟೊಡಂ ಕೆಟ್ಟೆನಿಲ್ಲೆನ್, ಪ್ರೇಮಮಯಿ ನೀಂತೊರೆಯೆ ಅಯ್ಯೊ ಶೂನ್ಯನೆಂ' ಎಂದೂ 'ಪಾಪಿಯಂ ಕೈಬಿಡದೆ ಪುಣ್ಯಕೊಯ್ಯುವ ದೇವಿ ನನಗೆ ನೀನೊರ್ವಳೆಯ ದಲ್' ಎಂದೂ ಹೃದಯಬಿಚ್ಚಿ ಹಾಡುತ್ತಾನೆ. ಈ ಅನ್ಯೋನ್ಯ ಪ್ರೇಮವನ್ನು ಕಂಡೇ ಆಂಜನೇಯ 'ಈ ಸತಿಯ ತಪಮಪ್ಪವ ಪಡೆದವಗೆ ಆ ಸತಿಯ ಊ ಪತಿಯ ಮೋಹವೆಂತುಟೊ'ಎಂದು ಅಚ್ಚರಿಪಡುತ್ತಾನೆ.

ನೈತಿಕಶಕ್ತಿ, ಅಧ್ಯಾತ್ಮಸಾಧನೆಗಳ ಬೆಂಬಲ, ಹಿನ್ನೆಲೆ, ಮಂಡೋದರಿಯ ಉದಾತ್ತ ವ್ಯಕ್ತಿತ್ವಕ್ಕಿದೆ. ಮಂಡೋದರಿ ಸ್ವಾರ್ಥಿಯಲ್ಲ. ತನಗೆ, ತನ್ನ ಗಂಡನಿಗೆ ಮಾತ್ರ ಮಂಗಳವನ್ನು ಕೋರುವ ಸಂಕುಚಿತ ಮನಸ್ಕಳಲ್ಲ. 'ಸರ್ವರ್ಗೆ ಶುಭಮಕ್ಕೆ, ಕಲ್ಯಾಣ ಕಲ್ಪತರು ಶಿವನಿದಿರ್ ಪ್ರಾರ್ಥನೆಗೆ ಕಾರುಣ್ಯಪೂರ' 'ಸನ್ಮತಿಯನೀಡಿಸಿ ಶಾಂತಿ ಸುಖಮಕ್ಕೆ ಸರ್ವರಿಗೆ' ಎನ್ನುವ ಉದಾರಮನಸ್ಸು, ವಿಶಾಲಹೃದಯ ಅವಳದು. 'ಪತಿವ್ರತೆಯ ಸುವ್ರತದ ಮಹಿಮೆಯಂ ಸಂಯಮನಿರ್ದೆಗೊಳಲ್ ಸೋಲೆಂಬರೇನದಂ, ಸುಕೃತಮತಿಗಳ್. ಶಿವಕೆ ಶರಣಾದರದು ಸೋಲೆ, ಆ ಗೆಲ್ಗೆ ಮಿಗಿಲೊಳದೆ ಬೇರೆ ಗೆಲ್ಲಂ? ಇಂದ್ರ ವಿಜಯಿಗಿಂ ನೂರುಮಡಿ ವೀರ ವಿಕ್ರಮಿಯಲ್ತೆ ಇಂದ್ರಿಯವಿಜಯಿ. ಸೋಲು ಸತ್ಯಕ್ಕೆ, ನಮಗದುವೆ ಗೆಲ್. ಸೋಲು ಧರ್ಮಕ್ಕೆ, ನಮಗದುವೆ ಗೆಲ್. ಸೋಲ್ ಒಲಂಪಿಗದುವೆ ಸಾಮ್ರಾಜ್ಯ ಸಂಪದಂ ನಮಗೆ ದಲ್'. ಮಂಡೋದರಿಯಾಡಿದ ಈ ಮೇಲಿನ ನುಡಿಗಳಲ್ಲಿ ಅವಳ ಧರ್ಮಾಭಿಮಾನ, ನ್ಯಾಯದೃಷ್ಟಿ, ಹೃದಯದ ಪವಿತ್ರತೆಗಳು ನಿಚ್ಚಳವಾಗಿ ಹೊರಹೊಮ್ಮುತ್ತಿವೆ. 'ಪೆಣ್ಗೆ ತನುವಲ್ತು ಹೃದಯಂ' ಎಂಬುದವಳ ನಿಲುವು. ಅದಕ್ಕೇ 'ಉಸಿರುಸಿರಿನಲಿ ಬೆಸೆದು ಒಲದೆದೆಗಳಂ ಕಿಳ್ತಿಳದು ತಂದು ಬೇರ್ಪಡಿಸುವರೆ' ಎನ್ನುವಳು. ತನ್ನ ಒಬ್ಬನೇ ಮಗ ದುರ್ಮರಣಕ್ಕೀಡಾದಾಗಲೂ ಅವಳ ಧರ್ಮದೃಷ್ಟಿ ಇನಿತೂ ಮಸುಳುವುದಿಲ್ಲ. ಪರಮ ದೈವಭಕ್ತಳು. ಅನನ್ಯ ಭಕ್ತಿಯಿಂದ ಭಗವಂತನನ್ನು ಆರಾಧಿಸಿದರೂ 'ಶಿವಕೃಪೆ ನಾನೆಂದು ನೊಗದೊಳಾಶಿಸಿದರದು ಬೇರೊಂದು ನೆಮ್ಮೊಹೆಗಳನಲ್ಲದಿಹ ನೊಗದಿ ಕೈಗೂಡಿ ನಡೆಸುವುದು ತನ್ನಿಚ್ಛೆಯಂ' ಎಂದು ಬಲ್ಲಳು. ಅಪಾರ ಅನುಕಂಪ, ಉದಾತ್ತ ಮಾನವೀಯತೆ ಮುಂತಾದ ಸದ್ಗುಣಗಳಿಂದ ಭೂಷಿತಳಾದ ಮಂಡೋದರಿ ಒಂದು ಅನರ್ಘ್ಯ ಸ್ತ್ರೀರತ್ನ.

ಹೀಗೆ ಶ್ರೀ ರಾಮಾಯಣದರ್ಶನಂ ದಲ್ಲಿ ಚಿತ್ರಿತವಾಗಿರುವ ಸ್ತ್ರೀ ಪಾತ್ರಗಳಲ್ಲಿ ಮಂಡೋದರಿಯ ಸ್ಥಾನ ವಿಶಿಷ್ಟವಾದದ್ದು. ಸೀತೆ ಮಂಡೋದರಿಯರಿಬ್ಬರೂ, ಬೇರೆಬೇರೆಯಾಗಿ ತೋರುವುದಿಲ್ಲ. ನಡೆನುಡಿಗಳಲ್ಲಿ, ರೀತಿ ನೀತಿಗಳಲ್ಲಿ, ಧ್ಯೇಯ ಸಾಧನೆಗಳಲ್ಲಿ, ಮನೋಧರ್ಮದಲ್ಲಿ, ಅವರು ಒಂದೇ ಶಕ್ತಿಯ ಎರಡು ಅಭಿವ್ಯಕ್ತಿಗಳಂತೆ ಕಾಣುತ್ತಾರೆ ಮಂಡೋದರಿ ಮಹಾಪತಿವ್ರತೆಯಾಗಿ, ಸದ್ಗೃಹಿಣಿಯಾಗಿ ಪ್ರೇಮತಪಸ್ವಿನಿಯಾಗಿ, ಸೀತೆಯನ್ನು ಸರಿಗಟ್ಟಬಲ್ಲ ಮಹಾಸಾಧ್ವಿಯಾಗಿ, ಸದಾಕಾಲದಲ್ಲೂ ಸರ್ವರೂ ಆರಾಧಿಸಬಹುದಾದ ಪವಿತ್ರ ವ್ಯಕ್ತಿಯಾಗಿ, ನಾನು ಸ್ಮರಣ ಮಾತ್ರದಿಂದಲೇ ಅನನ್ಯ ಪ್ರಭಾವವನ್ನು ಬೀರಬಲ್ಲ ಚೈತನ್ಯಶಕ್ತಿಯಾಗಿ, ಪಾಪಿಗಳ ಹೃದಯದಲ್ಲೂ ಪುಣ್ಯವನ್ನು ಪ್ರಚೋದಿಸಬಲ್ಲ ತೇಜಸ್ವಿನಿಯಾಗಿ ಈ ಕಾವ್ಯದಲ್ಲಿ ವಿರಾಜಿಸುತ್ತಾಳೆ. ಓದುಗರ ಮನದಲ್ಲಿ ಚಿರಸ್ಥಾಯಿಯಾಗಿ ನಿಲ್ಲುತ್ತಾಳೆ.

★

(8 ನೇ ಪುಟದಿಂದ)

ಸುಗ್ರೀವನಿಂದ ಆಜ್ಞೆ ಪಡೆದು ಸೀತೆಯನ್ನು ಹುಡುಕಲು ಹೊರಟ ವಾನರ ಸೇನೆ ದಕ್ಷಿಣ ಸಮುದ್ರತೀರದಲ್ಲಿ ನಿರಾಶೆಯಿಂದ – ಮಂಕಾಗಿ ಕುಳಿತಿದೆ. ಪೂರ್ವ ಪಶ್ಚಿಮ ಉತ್ತರ ದಿಕ್ಕುಗಳಿಂದ ಬಂದ ಸುದ್ದಿ ಆಶಾದಾಯಕವಾಗಿಲ್ಲ. ಪ್ರಾಯೋಪವೇಶಮಾಡಿ ಪ್ರಾಣ ಬಿಡುವುದು ಸೂಕ್ತವೆಂಬ ನಿರ್ಣಯಕ್ಕೆ ಬರುತ್ತಿದೆ ವಾನರ ಸೇನೆ. ಜಟಾಯು ಮರಣ, ವಾಲಿವಧೆ, ಸುಗ್ರೀವ ರಾಜ್ಯಾಭಿಷೇಕ, ರಾಮಸುಗ್ರೀವಸಖ್ಯಾ, ಸೀತಾನ್ವೇಷಣಾ ಪ್ರಯತ್ನ............ಇತ್ಯಾದಿ ಗತಘಟನೆಗಳನ್ನು ಕುರಿತು ವಾನರ ವೀರರು ಮಾತಾಡುತ್ತಿದ್ದಾಗ, ಬೆಟ್ಟದ ಮೇಲಿಂದ ಒಂದು ಮಾತು ಕೇಳಬಂತು– ಕೋ ಅಯಂಗಿರಾ ಘೋಷಯತಿ ಪ್ರಾಣೈಃ ಪ್ರಿಯತರಸ್ಯಮೇ? – ನನಗೆ ಪ್ರಾಣಪ್ರಿಯವಾದ ಈ ಮಾತನ್ನಾಡುತ್ತಿರುವರು ಯಾರು? ಕುತೂಹಲದ ಮಾತು ಕೇಳಿಸಿತು. ಮರುಕ್ಷಣದಲ್ಲೇ ಜಟಾಯುಷೋ ವಧಂ ಭ್ರಾತುಃ ಕಂಪಯನ್ನಿವ ಮೇ ಮನಃ –ಎಂಬ ಸಂಕಟದ ಮಾತು ಕೇಳಿಬಂತು. ವಾನರ ಶ್ರೇಷ್ಠರು ತಲೆ ಎತ್ತಿ ನೋಡಿದರು. ಬೃಹದಾಕಾರದ ಸಂಪಾತಿಯನ್ನು ಕಂಡು ಪ್ರಾರಂಭದಲ್ಲಿ ಭಯಪಟ್ಟರು. ಯುವರಾಜ ಅಂಗದ ತನ್ನಗುಂಪಿನ ವ್ಯಥೆಯ ಕಥೆಯನ್ನು ಸಂಪಾತಿಗೆ ತಿಳಿಸಿದ. ಸೋದರ ಜಟಾಯುವಿನ ಮರಣದ ವರ್ತಮಾನ ಕೇಳಿ ಸಂಪಾತಿ ತುಂಬ ಗೋಳಾಡಿದ.

ಸುರಲೋಕಾಧಿಪತಿಯಾದ ಮಹೇಂದ್ರನಿಗೂ, ವೃತ್ರಾಸುರನಿಗೂ ನಡೆದ ಭೀಕರಯುದ್ಧದಲ್ಲಿ, ಮಹೇಂದ್ರ ಜಯಗಳಿಸಿದ ಲೋಕವಿಖ್ಯಾತ ಘಟನೆಯುಂಟಷ್ಟೆ. ವಿಜಯಗರ್ವಿತನಾದ ದೇವೇಂದ್ರನ ಮೇಲೆ ಸಂಪಾತಿಯೂ ಜಟಾಯುವೂ ಯುದ್ಧಕ್ಕಾಗಿ ಹೋದರಂತೆ. ಇಂದ್ರನನ್ನು ಸೋಲಿಸಿ ಬರುವಾಗ, ಉತ್ಸಾಹದಿಂದ ಸೂರ್ಯ ಮಂಡಲದ ಕಡೆಗೆ ಜಿಗಿದರಂತೆ. ಭಾಸ್ಕರನ ಪ್ರಬಲಶಾಖಕ್ಕೆ ಚಿಕ್ಕವನಾದ ಜಟಾಯು ತಲ್ಲಣಿಸಿ ಹೋದುದನ್ನು ಕಂಡು, ಸಂಪಾತಿ ಸಹಜ ವಾತ್ಸಲ್ಯದಿಂದ ತಮ್ಮನನ್ನು ತನ್ನ ರೆಕ್ಕೆಗಳ ಕೆಳಗೆ ಅಡಗಿಸಿಕೊಂಡನಂತೆ. ತತ್ಫಲವಾಗಿ–ಸಂಪಾತಿಯ ರೆಕ್ಕೆಗಳೂ ಸುಟ್ಟು ಹೋಗಿ–ಬೀಸುಗಾಳಿಗೆ ಸಿಕ್ಕಿದ ತರಗೆಲೆಗಳಂತೆ–ಜಟಾಯುವೊಂದು ಕಡೆ, ಸಂಪಾತಿಯೊಂದು ಕಡೆ ಉರುಳಿಬಿದ್ದರಂತೆ. ಅಂದಿನಿಂದ ಈ ತನಕ ಸಂಪಾತಿಗೆ ತನ್ನ ತಮ್ಮನ ಸುದ್ದಿ ತಿಳಿಯದು. ಈಗ ಅವನ ಮರಣವಾರ್ತೆಯನ್ನು ವಾನರರ ಮೂಲಕ ಕೇಳಿದಾಗ ಸಂಪಾತಿಗೆ ತುಂಬ ಸಂಕಟವಾಯ್ತು. ಯುವರಾಜ ಅಂಗದನ ಪ್ರಶ್ನೆಗುತ್ತರ ಕೊಡುತ್ತ, ಸೀತೆಯನ್ನು ರಾವಣ ಅಪಹರಿಸಿ ಕೊಂಡು ಹೋದ ಸಮಾಚಾರ ತನಗೆ ತಿಳಿದಿದೆ ಎನ್ನುತ್ತಾನೆ ಸಂಪಾತಿ. ಈ ಮಾತು ಕೇಳಿದ ವಾನರರಿಗೆ ಸೀತೆಯನ್ನು ಕಂಡರೇನೊ–ಎಂಬಷ್ಟು ಸಂತೋಷವಾಯ್ತು.

ನಿರ್ದಗ್ಧಪಕ್ಷೋ ಗೃಧ್ರೋಽಹಂ
ಗತವೀರ್ಯಃ ಪ್ಲವಂಗಮಾಃ
ವಾಙ್ಮಾತ್ರೇಣತು ರಾಮಸ್ಯ
ಕರಿಷ್ಯೇಽಸಾಹ್ಯಮುತ್ತಮಂ
–ಎಂದ ಸಂಪಾತಿ

ದೇವಾಸುರ ಸಂಗ್ರಾಮ, ಸಮುದ್ರಮಂಥನ ಇತ್ಯಾದಿ ಪ್ರಾಚೀನ ಘಟನೆಗಳನ್ನು ಸಂಪಾತಿ ಕೇಳಿದ್ದನಂತೆ. ಭಗವಂತನ ವಾಮನಾವತಾರ ಹಾಗೂ ತ್ರಿವಿಕ್ರಮಾಕಾರವನ್ನು ಕಂಡಿದ್ದನಂತೆ. ಆದರೆ ಈಗ ನಿಃಶಕ್ತನಾದ ಆ ವೃದ್ಧ–ಆತನ ರೆಕ್ಕೆಗಳೂ ಸಹ ಸುಟ್ಟು ಹೋಗಿರೋಣದರಿಂದ–ವಾನರರಿಗೆ–ವಾಚಾಸಹಾಯ ಮಾತ್ರ ಮಾಡಬಲ್ಲ. ರಾಮಧ್ಯಾನ ಪರಾಯಣಳಾದ ಒಬ್ಬ ಸಾಧ್ವಿಯನ್ನು ರಾವಣ ಗಗನಮಾರ್ಗದಲ್ಲಿ ಕೆಗೆದು ಕೊಂಡು ಹೋದುದನ್ನಾತ ಕಂಡಿದ್ದಾನೆ. ಆದರೆ ಆಕೆಯನ್ನು ರಕ್ಷಿಸಲು ಸಂಪಾತಿಯ ಕೈಲಾಗಲಿಲ್ಲ. ಅಪರಾಧಿಯೂ, ಅದ್ಭುತಪರಾಕ್ರಮಿಯೂ, ಲೋಕವಿಖ್ಯಾತ ಕನಕಲಂಕಾ ಅಧಿಪತಿಯೂ, ದರ್ಪೋಜ್ಜ್ವಲ ವ್ಯಕ್ತಿಯೂ ಆದ ರಾವಣನ ಬಗ್ಗೆ ಆತನಿಗೆ ಸಾಕಷ್ಟು ವಿಚಾರ ತಿಳಿದಿದೆ. ತಿಳಿದಿರುವುದೇನು ಬಂತು-ಸೀತೆ–ಲಂಕೆ– ರಾವಣ ........ಎಲ್ಲರೂ ಎಲ್ಲವೂ ಆತನಿಗೆ ಗೋಚರವಾಗುತ್ತಿತ್ತು.

ಇಹಸ್ಥೋಽಹಂ ಪ್ರಪಶ್ಯಾಮಿ ರಾವಣಂ ಜಾನಕೀಂ ತಥಾ–ಎನ್ನುತ್ತಾನೆ ಆಯೋಜನ ಶತಾತ್ ಸಾಗ್ರಾತ್ ವಯಂ ಪಶ್ಯಾಮ ನಿತ್ಯಶಃ-ಎನ್ನುತ್ತಾನೆ ನೂರುಯೋಜನ ಅಥವ ಅದಕ್ಕಿಂತ ಸ್ವಲ್ಪ ದೂರದ ದೃಶ್ಯಗಳು ಆತನಿಗೆ ಸ್ಪಷ್ಟವಾಗಿ ಕಾಣುತ್ತವೆ. ಅಷ್ಟು ಮಾತ್ರ ಇದೆ ಮುದುಕ ಸಂಪಾತಿಯ ಕಣ್ಣಿನ ಶಕ್ತಿ–ಈ ಇಳಿವಯಸ್ಸಿನಲ್ಲಿ.

ಈ ಸಂಪಾತಿಗೊಬ್ಬ ಮಗನಿದ್ದಾನೆ ಅವನ ಹೆಸರು ಸುಪಾರ್ಶ್ವ. ತಂದೆಯನ್ನಾತ ಅಕ್ಕರೆಯಿಂದ ಪೋಷಿಸುತ್ತಾನೆ. ಒಂದು ದಿನ ಆಹಾರ ತರಲು ಹೊರಟ ಸುಪಾರ್ಶ್ವ ಸೂರ್ಯಾಸ್ತಮಾನದ ವೇಳೆಗೆ ಬಂದ–ರಿಕ್ತ ಹಸ್ತನಾಗಿ ಬಂದ. ಹಸಿದ ಸಂಪಾತಿ ಅವನ ಮೇಲೆ ರೇಗಿದ ಆಹಾರ ಸಿಕ್ಕಲಿಲ್ಲವೆ? ಸಿಕ್ಕಿದರೂ ತರಲಿಲ್ಲವೇ? ಎಂದೆಲ್ಲ ವಿಚಾರಿಸಿದ. ಪರ್ವತ ಪ್ರಾಂತಗಳಲ್ಲಿ ಆಹಾರಕ್ಕಾಗಿ ಸಂಚಾರಮಾಡುತ್ತಿದ್ದಾಗ, ಒಬ್ಬ ಗೌರವಾನ್ವಿತ ಮಹಿಳೆಯನ್ನು ರಾವಣ ಗಗನ ಮಾರ್ಗದಲ್ಲಿ ಕೆಗೆದುಕೊಂಡು ಹೋಗುತ್ತಿದ್ದುದನ್ನು ನೋಡಿದ ಸುಪಾರ್ಶ್ವ, ಅವರಿಬ್ಬರನ್ನೂ ಹಿಡಿದು ತಂದರೆ–ಸಾಕಷ್ಟು ಆಹಾರ

ವಾದೀತೆಂದ ಭಾವಿಸಿದ. ಭೀಮ ಪರಾಕ್ರಮಿಯೂ, ಬೃಹದ್ದೇಹಿಯೂ ಆದ ಸುಪಾರ್ಶ್ವನನ್ನು ಕಂಡು ಹೆದರಿದ ರಾವಣ, ಕೃಪೆಮಾಡಿ ದಾರಿ ಬಿಡ ಬೇಕೆಂದು ದೀನನಾಗಿ ಬೇಡಿಕೊಂಡ. ಅವನ ದೌರ್ಬಲ್ಯಕ್ಕೂ, ದೈನ್ಯಕ್ಕೂ ಮನಕರಗಿ–ಸುಪಾರ್ಶ್ವ–ಆತನನ್ನು ಬಿಟ್ಟು ಬಿಟ್ಟ. ಆ ರಾಕ್ಷಸನೇ ರಾವಣ ನೆಂದೂ, ಆಕೆ ಸೀತಾದೇವಿಯೆಂದು–ಆ ನಂತರ ಆತನಿಗೆ ಸುತ್ತಮುತ್ತಣ ಋಷಿ ಮುನಿಗಳಿಂದ ತಿಳಿದು ಬಂತು. ಇಷ್ಟೆಲ್ಲ ಕೇಳಿದ ಸಂಪಾತಿಗೆ ತುಂಬ ವ್ಯಥೆಯೂ ಆಯ್ತು, ಕೋಪವೂ ಬಂತು. ಆಕೆಯನ್ನು ರಕ್ಷಿಸಲಾಗಲಿಲ್ಲವೆಂಬ ವ್ಯಥೆಯೊಂದು ಕಡೆ, ಕ್ಷುದ್ರ ರಾವಣನನ್ನು ಕೊಲ್ಲದೆ ಬಂದನಲ್ಲ ಮಗ–ಎಂದು ಕೋಪ ಬೇರೆ!!

ಇಷ್ಟೆಲ್ಲ ಸಮಾಚಾರವನ್ನು ಸಂಪಾತಿಯಿಂದ ಕೇಳಿದ ವಾನರಿಗೆ ಆಶ್ಚರ್ಯವೋ ಆಶ್ಚರ್ಯವಾಯ್ತು. ಅವರು ಆತನ ಪ್ರಾರ್ಥನೆಯಂತೆ ಆತನನ್ನು ಸಾಗರ ತೀರಕ್ಕೆ ಹೊತ್ತು ತಂದರು. ಸಂಪಾತಿ, ತನ್ನ ತಮ್ಮನಾದ ಜಟಾಯುವಿಗೆ ತರ್ಪಣ ಕೊಟ್ಟು ನಂತರ ತನ್ನ ಕಥೆಯನ್ನು ಮುಂದುವರಿಸಿದ.

ಆ ದಿನ ಸೂರ್ಯ ಕಿರಣಗಳಿಂದ ದಗ್ಧ ಪಕ್ಷನಾಗುರುಳಿ ಬಿದ್ದನಂತರ ಏನಾಯ್ತು? ಸುಮಾರು 8–10 ದಿನಗಳ ವರೆಗೆ ಸಂಪಾತಿಗೆ ಜ್ಞಾನವೇ ಇರಲಿಲ್ಲ ಆಗ ನಿಶಾಕರನೆಂಬ ಮಹರ್ಷಿ ಜ್ಞಾನಶೂನ್ಯನಾಗಿ ಬಿದ್ದಿದ್ದ ಸಂಪಾತಿಗೆ–ಬಹಳ ಉಪಚಾರ ಮಾಡಿದನಂತೆ. ಕ್ರಮೇಣ ಚೇತರಿಸಿ ಕೊಂಡನಾದರೂ ಸಂಪಾತಿ–ರೆಕ್ಕೆಗಳು ಸುಟ್ಟು ಹೋದ ಪರಿಣಾಮವಾಗಿ ಹಾರಲಾರದೆ ವ್ಯಥೆ ಪಡಬೇಕಾಯ್ತು. ಆಗ ನಿಶಾಕರರ ಪೋಷಣೆಯಲ್ಲೇ ಬಹುಕಾಲ ಸಾಗಿತು. ವಾನರರು ಸಂಪಾತಿಯನ್ನು ಭೇಟಿಮಾಡುವ ಕಾಲಕ್ಕೆ ನಿಶಾಕರ ಮುನಿ ಇರಲಿಲ್ಲ. ಆವೇಳೆಗೆ ಆತ ಸತ್ತು 8 ಸಹಸ್ರವರ್ಷವಾಗಿತ್ತು. ಸುಟ್ಟು ಹೋದ ರೆಕ್ಕೆಗಳು ಪುನಃ ಯಥಾಸ್ಥಿತಿಯಾಗಿ ಮೂಡಿ ಬರುತ್ತವೆಂದು ಭವಿಷ್ಯ ದರ್ಶಿಯಾದ ನಿಶಾಕರ ಮಹರ್ಷಿ ಹೇಳಿದ್ದನಂತೆ. ಅದು ಯಾವಾಗ? ತ್ರೇತಾಯುಗದಲ್ಲಿ ರಾಮಪತ್ನಿ ಸೀತೆಯನ್ನು ಹುಡುಕುವ ಸಲುವಾಗಿ ವಾನರಸೇನೆ ಬರುತ್ತದೆ. ಅವರಿಗೆ ಸೀತೆಯ ಬಗ್ಗೆ ವಿಚಾರ ತಿಳಿಸಿ ರಾಮ ಕಾರ್ಯಕ್ಕೆ ನೆರವಾಗುವಂತೆ ಸಲಹೆ ಕೊಟ್ಟಾಗ!! ಈ ಮಾತು ಸಂಪಾತಿಗೆ ಚೆನ್ನಾಗಿ ನೆನಪಿತ್ತು. ಋಷಿಯಮಾತು ಸುಳ್ಳಾದೀತೇ ? ವಾನರರೊಂದಿಗೆ ಹೀಗೆಲ್ಲ ಮಾತಾಡುತ್ತಿರುವಷ್ಟರಲ್ಲಿ, ಸಂಪಾತಿಯ ದೇಹದಲ್ಲಿ ಮಿಂಚು ಸಂಚರಿಸಿದಂತಾಯ್ತು. ರೆಕ್ಕೆಗಳು ಒಂದೊಂದಾಗಿ ಚಿಗುರ ತೊಡಗಿದುವು. ಸಂಪಾತಿಗೆ ಪರಮಾನಂದವಾಯ್ತು. ವಾನರರಿಗೆ ಇದೆಲ್ಲ ಕಂಡು ಮಹದಾಶ್ಚರ್ಯವಾಯ್ತು. ಸೀತಾದೇವಿಯನ್ನು ಹುಡುಕಲು ಪ್ರಯತ್ನಮಾಡಿ. ಈ ಕಾರ್ಯದಲ್ಲಿ ಖಂಡಿತ ಜಯವಾಗುತ್ತದೆ–ಎಂದು ಸೂಚಿಸಿದ ಸಂಪಾತಿ ಹೇಳುತ್ತಾನೆ.

ಪಕ್ಷಲಾಭೋಮಮಾಯಂ ವಃ ಸೀತಾಪ್ರತ್ಯಯ ಕಾರಕಃ – ನನಗೆ ರೆಕ್ಕೆಗಳು ಮೂಡಿ ಬಂದದ್ದೇ ಇದಕ್ಕೆ ಸಾಕ್ಷಿ. ರಾಮಾನುಗ್ರಹ ದಿಂದ ನಿಮ್ಮ ಕಾರ್ಯ ಸಫಲವಾಗೇ ತೀರುತ್ತದೆ–ಎಂದು ಭಯಪಟ್ಟಿದ್ದ ವಾನರಸೈನ್ಯಕ್ಕೆ ಧೈರ್ಯ ತುಂಬಿದ ಸಂಪಾತಿ. ಅವರಿಗೆ ಲಂಕೆಯ ಬಗ್ಗೆ ಪೂರ್ಣ ಮಾಹಿತಿ ನೀಡಿದ. ಅಲ್ಲಿನ ಗುಡಿ ಗೋಪುರಗಳು, ರಾವಣನ ವಿಪುಲ ವೈಭವ, ಬಹು ಎಚ್ಚರಿಕೆಯಿಂದ ಈ ಕಾರ್ಯವಾಗಬೇಕೆಂಬ ಸಮಯೋಚಿತ ಸಲಹೆ – ಎಲ್ಲವನ್ನು ನೀಡಿದ ವೃದ್ಧ ಸಂಪಾತಿ–ಬಹುಶಃ ವಾನರ ಸೈನ್ಯಕೆ ಆಶಾಕಿರಣದಂತೆ–ಆಶಾಗೋಪುರದಂತೆ ಕಂಡು ಬಂದನೆಂದರೆ ಆಶ್ಚರ್ಯವಾಗಲಾರದು. ರಾಮಕಾರ್ಯವೆಂದರೆ ಹೇಗೋ ನೆರವು ಬರುತ್ತದೆ–ಎಲ್ಲವೂ ಪ್ರಭು ಕೃಪೆ–ಎಂದು ಭಾವಿಸಿದರು ವಾನರರು.

ಆದಿಕವಿ ವಾಲ್ಮೀಕಿ ತನ್ನ ಅಮರ ಕಾವ್ಯದಲ್ಲಿ ಚಿತ್ರಿಸಿರುವ ಈ ಎರಡೂ ಪಕ್ಷಿಗಳ ಕಥೆ ವಿಚಿತ್ರವಾಗಿದೆ–ಚಿತ್ರೋಪಮವಾಗಿದೆ – ಅದ್ಭುತವಾಗಿದೆ. ಅನುಜ ಜಟಾಯು ಸೀತೆಯನ್ನು ಕಾಪಾಡಲು ಪ್ರಯತ್ನಮಾಡಿ–ಆ ಪ್ರಯತ್ನದಲ್ಲೇ ಪ್ರಾಣತೆತ್ತ ಅಗ್ರಜ ಸಂಪಾತಿ ಸೀತಾನ್ವೇಷಣಾ ಕಾರ್ಯಕ್ಕೆ ಯಥೋಚಿತ ಸಲಹೆ ಕೊಟ್ಟು ನೆರವಾದ. ಈ ಖಗದ್ವಯ ರಾಮನ ಕೃಪೆಗೆ ಪಾತ್ರರಾದವರು. ಸತ್ತು ಸದ್ಗತಿ ಪಡೆದವನೊಬ್ಬ–ರೆಕ್ಕೆಗಳನ್ನು ಪಡೆದು ಬದುಕಿದವನೊಬ್ಬ. ಇಬ್ಬರೂ ಧನ್ಯರೆ, ಕೀರ್ತಿ ಭಾಜನರೆ. ಸಂಪಾತಿಗೆ ರೆಕ್ಕೆ ಕೊಟ್ಟವನೂ ರಾಮನೆ ಜಟಾಯುವಿಗೆ ಮುಕ್ತಿ ಇತ್ತವನೂ ರಾಮನೆ. ಆದಿಕಾವ್ಯದ ಈ ಅಗ್ರಜಾನುಜ ಪಕ್ಷಿಗಳು ಮಾನವ ಲೋಕಕ್ಕೆ ಭವ್ಯ ಸಂದೇಶಗಳಾಗಿ ನಿಂತಿವೆ–ಕೀರ್ತಿ ಪಡೆದಿವೆ. ವಾಲ್ಮೀಕಿಯ ಧರ್ಮಾನುರಾಗಕ್ಕೆ ಉಜ್ವಲ ನಿದರ್ಶನಗಳಂತಿವೆ.

★

## ಏನೆಂದು ಬಣ್ಣಿಸಲಿ

**ಪೂರ್ವಿಕಲ್ಯಾಣಿರಾಗ – ಝಂಪೆತಾಳ**

ಏನೆಂದು ಬಣ್ಣಿಸಲಿ ಶ್ರೀವೆಂಕಟೇಶಾ
ದೇವೇಶ ಸ್ವಯಂ ಜ್ಞಾನ ಪ್ರಕಾಶಾ ॥ ಪ ॥

ಸಕಲ ವೇದ ವೇದ್ಯ ನೀ ನೆನ್ನಲೇ
ದಿವ್ಯ ಮಂಗಳ ವಿಗ್ರಹನೆನ್ನಲೇ ।
ಅಸದೃಶ ಗುಣಪೂರ್ಣ ನೆನ್ನಲೇ
ಪಂಚಭೂತ ಚಂದ್ರಾದಿತ್ಯನೆನ್ನಲೇ ॥ ೧ ॥

ಪದ್ಮಾಕ್ಷ ಪ್ರವಾಳ ವಕ್ತ್ರನೆನ್ನಲೇ
ಶ್ರೀ ವತ್ಸ ವಕ್ಷಸ್ಥಲ ನೆನ್ನಲೇ ।
ಶಂಖ ಚಕ್ರ ಧಾರಿ ಎನ್ನಲೇ
ಜೀವ ಜಗದಂತರಾತ್ಮಾ ಎನ್ನಲೇ ॥ ೨ ॥

ಅಂಬರ ಜ್ಯೋತಿ ಸ್ವರೂಪ ನೆನ್ನಲೇ
ಪರಮ ಪುರುಷ ಪುರುಷೋತ್ತಮನೆನ್ನಲೇ ।
ದೊರಕದ ಮಾಣಿಕ್ಯವೆನ್ನಲೇ
ಸುವರ್ಣ ಮುಕ್ತಾಫಲವೆನ್ನಲೇ ॥ ೩ ॥

ಭಕ್ತ ಕ್ಲೇಶ ನಾಶಕ ನೆನ್ನಲೇ
ಮಹಾವಿಭೂತಿ ಸರ್ವೇಶ್ವರ ನೆನ್ನಲೇ
ನಿರತಿಶಯ ಭೋಗ್ಯ ವಸ್ತುವೆನ್ನಲೇ
ಮಾಯಾಮಯ ದಿವ್ಯಮರಕತವೆನ್ನಲೇ ॥ ೪ ॥

(ನಮ್ಮಾಳ್ವಾರ್ ಅವರ ತಿರುವಾಯ್ಮೊಳಿಯ ಪಾಶುರದ ಅನುವಾದ.)

**—ಶ್ರೀ ಬಿ. ಎಸ್. ರಾಮಾಚಾರ್**

(6 ನೇ ಪುಟದಿಂದ)

ಜನರಿಗೂ ಅನ್ವಯವಾಗತಕ್ಕವು. "ಅಂಗದಾ! ನೀನಿನ್ನೂ ಚಿಕ್ಕವನು. ನಾನು ಹೇಳುವ ಮಾತುಗಳನ್ನು ಗಮನಿಸಿ, ಎಚ್ಚರಿಕೆಯಿಂದ ವರ್ತಿಸು. ದೇಶಕಾಲ ನೋಡಿ, ಆಯಾ ಸಂದರ್ಭಕ್ಕೆ ತಕ್ಕಂತೆ ನಡೆ. ಸುಖ ದುಃಖಗಳನ್ನೂ, ಪ್ರಿಯಾಪ್ರಿಯಗಳನ್ನೂ ಸಹನೆಯಿಂದ ಸಹಿಸು. ಅತಿಯಾದ ಸ್ನೇಹ ತೋರಿಸಬೇಡ. ಅತಿಯಾದ ಕ್ರೋಧವನ್ನು ವ್ಯಕ್ತಪಡಿಸಬೇಡ. ಸುಗ್ರೀವರಾಜನು ಹೇಳಿದಂತೆ ಕೇಳು".

ಯುದ್ಧಕಾಂಡದಲ್ಲಿ ಸೀತಾದೇವಿಯು ರಾವಣನಿಗೆ ಹೇಳುವ ಬುದ್ಧಿ ಮಾತುಗಳಂತೂ ಅದ್ಭುತವಾಗಿವೆ. ತನ್ನ ಪತಿಯಾದ ರಾಮನು ಎಂದೂ ಸುಳ್ಳು ಹೇಳುವವನಲ್ಲ. "ಸತ್ಯೇನ ಲೋಕಾನ್ ಜಯತಿ. ದೀನಾನ್ ದಾನೇನ ರಾಘವ" ಎಂಬಂತೆ ಸತ್ಯ ಪ್ರೇಮಕ್ಕಿಂತ ಹೆಚ್ಚಿನದು ಜಗತ್ತಿನಲ್ಲಿ ಇನ್ನೊಂದಿಲ್ಲ. ದೇಹ ಪೋಷಣೆಗೆ ಆಹಾರ ಹೇಗೆ ಅವಶ್ಯಕವೋ, ಹಾಗೆಯೇ ಆತ್ಮೋದ್ಧಾರಕ್ಕೆ ಪ್ರಾರ್ಥನೆ ಅತ್ಯಗತ್ಯ. ಪ್ರಾರ್ಥನೆಯು ಪರಮಾತ್ಮನಲ್ಲಿ ನಿಶ್ಚಲವಾದ ಭಕ್ತಿಯನ್ನುಂಟು ಮಾಡುವುದು. ಪರಮಾತ್ಮನ ಸಾನ್ನಿಧ್ಯವನ್ನು ಆತ್ಮನಲ್ಲಿ ಕಾಣಬೇಕು. ದೇವರು ಶರಣ್ಯನನ್ನು ಎಂದೂ ಕೈಬಿಡುವುದಿಲ್ಲ. ಎಲ್ಲರೂ ಅವರವರ ಕರ್ಮದಂತೆ ಫಲವನ್ನು ಅನುಭವಿಸಬೇಕು. ಕೆಟ್ಟಕೆಲಸ ಮಾಡಿದವನಿಗೆ ತಕ್ಕ ಶಿಕ್ಷೆ ಸಿದ್ಧ. ಅವನು ಇದನ್ನು ಅನುಭವಿಸಲೇಬೇಕು. ಹಾಗೆಯೇ ಗುಣವಂತನು ಉತ್ತಮ ಕಾರ್ಯಕ್ಕೆ ಯೋಗ್ಯ ಬಹುಮಾನ ಪಡೆಯುವನು. ವಿಭೀಷಣನು ಶರಣ್ಯನಾಗಿ ರಾಜನಾದ. ರಾವಣನು ಪರದಾರಾಪಹಾರ ಮಾಡಿ ಆ ಪಾಪದಿಂದ ಮಡಿದ.

ಹೀಗೆ ರಾಮಾಯಣದಲ್ಲಿ ನೀತಿತತ್ತ್ವಗಳೂ, ಆದರ್ಶ ನಡತೆಗಳೂ, ಅಮರಸಂದೇಶಗಳೂಬೇಕಾದಷ್ಟಿವೆ. ಇವೆಲ್ಲ ಉತ್ತಮ ಸಂಸ್ಕೃತಿಯ ಸರ್ವೋತ್ತಮ ಲಕ್ಷಣಗಳು. ಇವನ್ನು ಆಚರಿಸುವುದರಿಂದ ಶಾಂತಿ ಸೌಖ್ಯಗಳು ಲಭಿಸುವುದಲ್ಲದೆ, ಯಶಸ್ಸು ಉಂಟಾಗುವುದು. ರಾಮನಾಮದ ಮಹಿಮೆ ಅಪಾರ. ಇದರ ಅದ್ಭುತ ಮಹತ್ತು ವಿಶ್ವಾಮಿತ್ರ ಋಷಿಗೆ ತಿಳಿದಂತೆ ಇನ್ನಾರಿಗೂ ತಿಳಿದಿರಲಿಲ್ಲ. ಋಷಿಯು ರಾಮನಾಮದ ಮಹತ್ವವನ್ನು ತಾನು ಅನುಭವಿಸಿ, ಸರ್ವೋತ್ತಮ ಫಲವನ್ನು ಪಡೆದು ಲೋಕವೂ ಹಾಗೆಯೇ ಮಾಡಲಿ ಎಂದು ಉಪದೇಶ ಮಾಡಿದ್ದಾನೆ.

ಜಗತ್ತಿನಲ್ಲಿ ಪ್ರಸಿದ್ಧವಾದ ಅಹಿಂಸಾ ತತ್ತ್ವವು ರಾಮಾಯಣದಿಂದಲೇ ಗೊತ್ತಾದುದು. ಅಶೋಕವನದಲ್ಲಿ ಸೀತಾದೇವಿಗೆ ಅನೇಕ ತೊಂದರೆಗಳನ್ನುಂಟು ಮಾಡಿದ್ದ ರಾಕ್ಷಸಿಯರನ್ನು ರಾವಣವಧೆಯಾದ ಮೇಲೆ ಆಂಜನೇಯನು ಶಿಕ್ಷಿಸಬೇಕೆಂದು ಸೀತಾದೇವಿಯ ಅಪ್ಪಣೆ ಕೇಳಿದಾಗ ಅವಳು ಹೇಳಿದ ಮಾತುಗಳು ಆಶ್ಚರ್ಯಕರವಾಗಿವೆ. "ಆಂಜನೇಯಾ! ಜಗತ್ತಿನಲ್ಲಿ ಯಾರು ತಾನೆ ತಪ್ಪುಮಾಡುವುದಿಲ್ಲ. ಈ ರಾಕ್ಷಸಿಯರು ರಾಜನ ಸೇವಕರು. ರಾಜನು ಹೇಳಿದಂತೆ ಅವರು ಕೇಳಬೇಕು. ಇದು ಅವರ ಕರ್ತವ್ಯ. ದಾಸೀಜನರಾದ ಇವರಲ್ಲಿ ತಪ್ಪೇನಿದೆ? ಇವರ ಮೇಲೆ ಕೋಪಿಸಿ ಶಿಕ್ಷೆ ಮಾಡುವುದು ಸರಿಯಲ್ಲ. ಪಾಪಮಾಡಿದವರನ್ನು ರಕ್ಷಿಸಬೇಕು ಕೇಡುಮಾಡಿದವರನ್ನು ಕ್ಷಮಿಸಬೇಕು. ಅವರಿಗೆ ಹಿತಮಾಡುವುದು ಧರ್ಮ, ಆದುದರಿಂದ ನೀನು ಅವರ ತಂಟೆಗೆ ಹೋಗಬೇಡ. ಅವರಲ್ಲಿ ತಪ್ಪಿಲ್ಲ" ಎನ್ನುವಳು.

ರಾಷ್ಟ್ರಪಿತ ಮಹಾತ್ಮಾಗಾಂಧಿಯವರು ರಾಮನಾಮದ ಮಹಿಮೆಯನ್ನು ಮನಗಂಡು, ಭಜನೆ ಮಾಡುತ್ತಿದ್ದರು. ಅವರು ಸಂಸ್ಕೃತಿ ಸಂಪನ್ನರಾಗಿ, ಮಹತ್ವಪೂರಿತ ಮಾರ್ಗದರ್ಶಕರಾಗಿ, ಸರ್ವಶ್ರೇಷ್ಠವ್ಯಕ್ತಿ ಎಂದು ಜಗತ್ಪ್ರಸಿದ್ಧರಾಗುವುದಕ್ಕೆ ರಾಮಾಯಣವೇ ಕಾರಣವಾಗಿರಬಹುದೆಂದು ಊಹಿಸಬಹುದು.

ಹೀಗೆ ರಾಮಾಯಣವು ಮಾರ್ಗದರ್ಶಕ, ನೀತಿಧರ್ಮ ಬೋಧಕ ಮತ್ತು ಸಂಸ್ಕೃತಿ ಪ್ರಧಾನಕಾವ್ಯ ಎನ್ನುವುದರಲ್ಲಿ ಸಂದೇಹವಿಲ್ಲ. ಇದನ್ನು ಓದಿ, ಓದಿಸಿ ಕೇಳಿ, ಅನುಸಂಧಾನ ಮಾಡಿದರೆ,ಜನಜೀವನದ ಸಂಪತ್ತು ಹೆಚ್ಚುವುದು. ಅವರ ಪ್ರತಿಭೆ ವೃದ್ಧಿಯಾಗುವುದು. ಅವರಲ್ಲಿ ಸಂಸ್ಕೃತಿ ಶಾಶ್ವತವಾಗಿ ನೆಲಸುವುದು. ಅವರ ಭಾವೀ ಜೀವನ ಸುಂದರವಾಗುವುದು. ಒಟ್ಟಿನಲ್ಲಿ ರಾಮಾಯಣವು ಜನಜೀವನದ ಅನುಪಮ ಸಾಹಿತ್ಯ ಭಂಡಾರ, ಬಂಗಾರದ ಗಣಿ. ಮಾನವನು ಸುಸಂಸ್ಕೃತನಾಗುವುದಕ್ಕೆ ಏನೇನು ಬೇಕೋ ಅವೆಲ್ಲವೂ ಇದರಲ್ಲಿ ದೊರಕುವುದು. ರಾಮಾಯಣದಲ್ಲಿರುವ ಅಮರಸಂದೇಶಗಳನ್ನು ಎಷ್ಟು ಹೆಚ್ಚಾಗಿ ತಿಳಿದುಕೊಂಡು, ಮನನಮಾಡಿ ಆಚರಣೆಯಲ್ಲಿ ತಂದರೆ, ಜೀವನ ಅಷ್ಟು ಹಸನಾಗುವುದು, ಉತ್ತಮವಾಗುವುದು, ಸಾರ್ಥಕ್ಯಪಡೆಯುವುದು, ಸುಖಶಾಂತಿ ನೆಲಸುವುದು.

ರಾಮ ರಾಮೆಂದವನು ಸಗ್ಗಪ
ರಾಮಿನೀಜನರೊಡೆಯನಹ ರಘು
ರಾಮ ರಕ್ಷಿಸು ರಕ್ಷಿಸೆಂದವ
ಕಮಲಭವನಹನು।
ರಾಮ ಚರಿತಾಮೃತನ ಕೇಳ್ದವ
ರಾಮನಿಗೆ ಸರಿಯಹನು ಜಗದೊಳು
ರಾಮನಾಮಕೆ ಸರಿಯ ಕಾಣೆನು ||

ಎಂದು ಮುನಿ ನುಡಿದ.

ರಾಮಾಯ ರಾಮಭದ್ರಾಯ
ರಾಮಚಂದ್ರಾಯ ವೇಧಸೇ।
ರಘುನಾಥಾಯ ನಾಥಾಯ
ಸೀತಾಯಾಃ ಪತಯೇ ನಮಃ ||

ಆಪದಾಮಪಹರ್ತಾರಂ
ದಾತಾರಂ ಸರ್ವ ಸಂಪದಾಂ।
ಲೋಕಾಭಿರಾಮಂ ಶ್ರೀರಾಮಂ
ಭೂಯೋ ಭೂಯೋ ನಮಾಮ್ಯಹಂ ||



# ತಿ. ತಿ. ದೇವಸ್ಥಾನಗಳು, ತಿರುಪತಿ.
# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### ಕನ್ನಡ :

ಶ್ರೀನಿವಾಸನ ಹಾಡುಗಳು-ಭಾಗ-2 (ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರು) 4–50

ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ) –ವಿ. ಬಾದರಾಯಣ ಮೂರ್ತಿ 12–50

ಪುರಂದರೋಪನಿಷತ್ (ಪುರಂದರದಾಸರ ವಿಳುಕೃತಿ ವಿವರಣೆ) –ಬನ್ನಂಜೆ ಗೋವಿಂದಾಚಾರ್ಯ 7–00

ಕೇಶವಾದಿ ರೂಪಗಳು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾ ಚಾರ್ಯ 3–75

ಕರ್ನಾಟಕ ಹರಿದಾಸರು(ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾ ಚಾರ್ಯ 2–25

ಗೀತಾಸಾರೋದ್ಧಾರ –ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು 4–00

ಸ್ತೋತ್ರ ಕುಸುಮಮಾಲಾ –ಸಂ. ವೆಂಕಟಾಚಲ 3–00

ಶ್ರೀ ವೆಂಕಟೇಶ್ವರ ಸುಪ್ರಭಾತ, ಶ್ರಿವರ್ಣಚಿತ್ರ ವಿವರಣೆ 10–00

ಆಚಾರಗಳು ಆಡಂಬರಗಳು ––ಕೆ. ಚಂದ್ರಮೌಳಿ 0–40

ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) 0-50

" " (ಕನ್ನಡ ಲಿಪಿಯಲ್ಲಿ) 0–12

**ಮಕ್ಕಳಿಗಾಗಿ :**

ಶ್ರೀಪಾದರಾಜರು –ಎಂ. ಎಸ್. ಗುಂಡೂರಾವ್ 0–75

ಮಹಿಪತಿದಾಸರು –ಶಾನಭಾಗ 0–85

ಪ್ರಸನ್ನ ವೆಂಕಟದಾಸರು –ವಿ. ಬಾದರಾಯಣಮೂರ್ತಿ 0–80

ಗೋಪಾಲದಾಸರು - ರುಕ್ಮಿಣಿಗಿರಿಮಾಜಿ 0–75

### ಹಿಂದಿ :

ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ –ಡಾ॥ ಎಂ. ಸಂಗಮೇಶಂ 0–20

ಶ್ರೀ ವೆಂಕಟೇಶ್ವರ ಸುಪ್ರಭಾತ್ (ಸಚಿತ್ರ) 11–00

ತೀರ್ಥರಾಜ ತಿರುಪತಿ ಡಾ॥ ಎಂ. ಸಂಗಮೇಶಂ 1–50

### ಸಂಸ್ಕೃತ :

ಶ್ರೀ ವೇಂಕಟೇಶ್ವರ ಸುಪ್ರಭಾತಂ 0–12

ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ 0–62

ಕಠೋಪನಿಷತ್ –ಡಾ॥ ಕೆ.ಸಿ. ವರದಾಚಾರಿ ಹಾಗೂ ಡಾ॥ ಡಿ. ತಾತಾಚಾರ್ಯ 15–00

ಮಾರ್ಕಂಡೇಯ ಸಂಹಿತಾ 18–00

ತತ್ತ್ವಸಂಖ್ಯಾನಂ –ಆರ್. ರಾಮಮೂರ್ತಿ ಶರ್ಮಾ 2–00

ಬ್ರಹ್ಮಸೂತ್ರ ಭಾಷ್ಯ (ಭಾಗ–1) –ಆರ್. ರಾಮಮೂರ್ತಿ ಶರ್ಮಾ 30–00

ಅಲಂಕಾರ ಸಂಗ್ರಹ ಸಂ–ಕೆ. ಭಾಸ್ಕರರಾವ್ 16–00

ಸೀತಾರಾಮಾಂಜನೇಯಂ –ಡಾ॥ ಡಿ. ಅರ್ಕಸೋಮಯಾಜಿ 50–00

ಪ್ರಶ್ನೋಪನಿಷತ್ 11–00

ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ ಸಂ–ಡಾ॥ ಎಸ್.ಬಿ. ರಘುನಾಥಾಚಾರ್ಯ 25–00

1000 ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ 30% ರಿಯಾಯಿತಿಯೂ, 500 ರೂಗಳಿಂದ1000 ರೂ॥ 25% ರಿಯಾಯಿತಿಯೂ 100 ರೂ ಗಳಿಂದ 500 ರೂ ವರೆಗೆ 15% ರಿಯಾಯಿತಿಯೂ ಉಂಟು. ಅಂಚೆವೆಚ್ಚ ಪ್ರತ್ಯೇಕ.

ಕೂಡಲೇ ಬರೆಯಿರಿ :

**ಡೆಪ್ಯೂಟಿ ಎಕ್ಸಿಕ್ಯೂಟಿವ್ ಆಫೀಸರ್ (ಎಸ್)**
ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್,
ತಿ. ತಿ. ದೇ. ತಿರುಪತಿ.

(26ನೇ ಪುಟದಿಂದ)

ಮುಂದೆ ಇದು ಕಷ್ಟಕ್ಕೆ ಕಾರಣವಾಗುತ್ತದೆ" ಎನ್ನುತ್ತಾನೆ ರಾಮ. ಪತಿಯ ಮಾತು ಕೇಳುತ್ತಿದ್ದಂತೆ ಸೀತೆಗೆ ಚಲದ ಕಾವು ಏರುತ್ತದೆ. "ಕಾಡಿನ ಮೃಗಗಳಿಂದ ತನಗೆ ಎಂದಿಗೂ ಕೇಡು ಬಾರದು" ಎನ್ನುತ್ತಾಳೆ. ಸೀತೆಯ ಮಾತುಗಳನ್ನು ಕೇಳಿ. ರಾಮನಿಗೆ ಕೋಪ ಬರಲಿಲ್ಲ; ನಗು ಬಂತು. ಮುಂದಾಗಬಹುದಾದ ಕಥೆಯನ್ನು ಹೇಳುತ್ತಾ– "ಇದು ಈಗ ನಗೆಯುಕ್ಕು ಮುಂದೆ ಕಥೆಯುಕ್ಕು" ಎನ್ನುತ್ತಾನೆ. ಸೀತೆ ತನ್ನ ಹಟದಿಂದ ಹಿಂದೆ ಸರಿಯಲಿಲ್ಲ. ಕೊನೆಗೆ– "ವಲ್ಲಭೆ, ಸೀತೆ, ಒಳಗಿರು" ಎಂದು ಹೇಳಿ, ಜಿಂಕೆ ತರಲು ಹೋಗುತ್ತಾನೆ. ಗುಡಿಸಿಲಿನ ಆಚೆ ಲಕ್ಷ್ಮಣ ಇರುವುದನ್ನು ರಾಮ ನೋಡುತ್ತಾನೆ. ಅವನಿಗೆ ವಿಷಯ ತಿಳಿಸಿ, ಗುಡಿಸಿಲಿಗೆ ಹೋಗುವಂತೆ ಹೇಳುತ್ತಾನೆ. ಲಕ್ಷ್ಮಣ ಗುಡಿಸಿಲಿಗೆ ಬರುತ್ತಾನೆ. ಸ್ವಲ್ಪ ಹೊತ್ತಿನಲ್ಲೇ ರಾಮನ ದನಿಯಲ್ಲಿ 'ಲಕ್ಷ್ಮಣಾ' ಎಂದು ಕೂಗಿದುದು ಕೇಳಿಸುತ್ತದೆ. ಇದನ್ನು ಕೇಳಿ ಗಾಬರಿಗೊಂಡ ಸೀತೆ– "ಇದು ಏನು ಲಕ್ಷ್ಮಣಾ, ನಿನ್ನ ಅವರು ಕರೆವಾರು! ನಿನ್ನಣ್ಣಗೇನು ಭಯವಾಯ್ತೋ" ಎಂದು ಹೇಳುತ್ತಾಳೆ. ಅದಕ್ಕೆ ಲಕ್ಷ್ಮಣ–

ಎನ್ನ ಅವರು ಕರೀಲಿಲ್ಲ ಎನ್ನಣ್ಣಗೆ ಭಯವಿಲ್ಲ।
ನಿನ್ನೊಬ್ಬಳ ವನದಲ್ಲಿ ಬಿಟ್ಟು। ಪೋದರೆ।
ಎನ್ನೊಡನೆ ಸ್ವಾಮಿ ಮುನಿದಾನು॥

–ಎಂದು ಭವಿಷ್ಯದ ಯಾವುದೋ ಕೇಡನ್ನು ನೆನೆದು ಹೇಳುತ್ತಾನೆ ಆದರೆ ಸೀತೆಯದು ಒಂದೇ ಹಟ. ಅತ್ತಿಗೆಯ ಮಾತಿಗೆ ಮನದಲ್ಲೇ ನೊಂದುಕೊಂಡ ಅವನು —"ಕಂಡಿದ್ದ ಬಯಸುವಳು ಗಂಡ ಮರುಳಾಗುವನು। ಮುಂದಾನ ಕೇಡ ಅರಿಯಾಳು। ಎನ್ನತ್ತಿಗೆ" –ಎಂದುಕೊಳ್ಳುತ್ತಾ, ಬಿಲ್ಲು ಬಾಣಗಳೊಂದಿಗೆ ಮೇಲೆದ್ದು ಹೊರ ಬಂದು ಹೊಸಿಲಿನ ಹೊರಗೆ ಮುಂಭಾಗದಲ್ಲಿ ಮೂರು ಗೆರೆಗಳನ್ನು, ಬಿಲ್ಲಿನಿಂದ ಬರೆದು, ಧ್ವನಿ ಕೇಳಿ ಬಂದ ಕಡೆಗೆ ಹೋಗುತ್ತಾನೆ.

ರಾವಣ ಈ ಮೊದಲೇ ಇವರ ಪರ್ಣಕುಟಿಯ ಬಳಿ ಬಂದು ಕುಳಿತಿರುತ್ತಾನೆ. ರಾಮ ಲಕ್ಷ್ಮಣರು ಗುಡಿಸಿಲಿನಿಂದ ಆಚೆ ಹೋದದ್ದನ್ನು ಅವನು ಗಮನಿಸುತ್ತಾನೆ. ಕಾವಿ ವಸ್ತ್ರವನ್ನುಟ್ಟು, ಕೈಲಿ ಜಪಸರ ಹಿಡಿದು, ಸನ್ಯಾಸಿ ವೇಷ ಧರಿಸುತ್ತಾನೆ. ಮರೆಯಿಂದ ಈಚೆಗೆ ಬಂದು 'ರಾಮರಾಮ' ಎಂದು ಹೇಳುತ್ತಾ ಪರ್ಣಕುಟಿಯ ಮುಂದೆ ಬಂದು ನಿಲ್ಲುತ್ತಾನೆ. "ಶಂಭು ಮಹಾದೇವ" 'ಶಿವಶಿವ' ಎಂದು ಗಟ್ಟಿಯಾಗಿ ಹೇಳುತ್ತಾನೆ. ಸೀತೆ ಗುಡಿಸಿಲಿನೊಳಗೆ ನಿಂತು ಬಾಗಿಲ ಕಡೆ ನೋಡುತ್ತಾಳೆ. ಅವಳನ್ನು ಕಂಡ ಸನ್ಯಾಸಿ, ಅವಳ ದೇಶ ರಾಜ್ಯಗಳ ವಿಚಾರವಾಗಿ ಕೇಳುತ್ತಾನೆ. ಸೀತೆ ತಮ್ಮ ಊರು, ರಾಜವಂಶಗಳ ಬಗ್ಗೆ ಹೇಳುತ್ತಾಳೆ. ಆಗ ಸನ್ಯಾಸಿ– "ಹಸಿವಾಗಿದೆ; ಬಿಸಿಲೊಳಗೆ ಬಂದಿದ್ದೇನೆ; ಬಾಯಾರಿಕೆಯಾಗಿದೆ; ಏನಾದರೂ ಗ್ರಾಸಕೊಡಿ" ಎನ್ನುತ್ತಾನೆ. "ಅಡಿಗೆ ಊಟಗಳೆಂಬ ಗೊಡವೆ ನಮಗಿಲ್ಲ, ಅಡವಿಯ ಹಣ್ಣು ಫಲಾಹಾರ" ಎನ್ನುತ್ತಾಳೆ, ಸೀತೆ. ಅದಕ್ಕೆ ಸನ್ಯಾಸಿ–'ಹಣ್ಣು ಆದರಕ್ಕು ಹಂಪಲ ಆದರಕ್ಕು। ನೀವು ಉಂಬ ಗ್ರಾಸ ಎನಗಕ್ಕು' ಎನ್ನುತ್ತಾನೆ. ಹಣ್ಣು ಹಂಪಲುಗಳನ್ನು ಹಿಡಿದು ಸೀತೆ, ಸಿದ್ಧವಾಗಿದ್ದಾಳೆ. ಈಗ ಸೀತೆ – ಸನ್ಯಾಸಿಯ ನಡುವೆ ಹೊಸಿಲು ಮತ್ತು ಲಕ್ಷ್ಮಣ ಎಳೆದ ಗೆರೆಗಳಿವೆ. "ಗೆರೆ ದಾಟಿ ಬರಲಾರೆ" ಎನ್ನುತ್ತಾಳೆ, ಸೀತೆ "ಹೊಸ್ತಿಲೊಳಗೆ ಭಿಕ್ಷೆ ಕೊಡಬಾರದು ತಾಯಿ। ಈ ಗೆರೆಯನು ದಾಟಿ ಬಾ।" ಎನ್ನುತ್ತಾನೆ, ಸನ್ಯಾಸಿ. ಕೊನೆಗೆ, ಸೀತೆ, ಭಯಗ್ರಸ್ತಳಾಗಿಯೇ ಭಿಕ್ಷೆ ನೀಡಲು ಗೆರೆ ದಾಟಿ ಬರುತ್ತಾಳೆ. ಸನ್ಯಾಸಿ ಅವಳನ್ನು ಬಂಧಿಸಿ ಒಯ್ಯುತ್ತಾನೆ. ಈಗ, ಇವನು ಸನ್ಯಾಸಿಯಲ್ಲ ಎನ್ನುವುದು ಸೀತೆಗೆ ತಿಳಿಯುತ್ತದೆ. ವನದ ಪಕ್ಷಿಗಳನ್ನೂ, ವನದೇವತೆಗಳನ್ನೂ ಕುರಿತು, ತಾನು ರಾಮನಿಂದ ದೂರವಾಗುತ್ತಿರುವ ವಿಷಯವನ್ನು ರಾಮನಿಗೆ ತಿಳಿಸುವಂತೆ ಗೋಳಾಡಿ ಹೇಳುತ್ತಾಳೆ. ಮಾರ್ಗಮಧ್ಯದಲ್ಲಿ ಜಟಾಯುಪಕ್ಷಿ ರಾವಣನನ್ನು ತಡೆಯುತ್ತದೆ. ಅದನ್ನು ಸಾಯುವಂತೆ ಹೊಡೆದು ರಾಕ್ಷಸ ಮುಂದೆ ಹೋಗುತ್ತಾನೆ.

ಇತ್ತ ರಾಮಲಕ್ಷ್ಮಣರು ಗುಡಿಸಿಲಿಗೆ ಬರುತ್ತಾರೆ. ಸೀತೆ ಇಲ್ಲದಿರುವುದನ್ನು ನೋಡಿ ಗಾಬರಿ ಕಳವಳದಿಂದ, ಅವಳನ್ನು ಹುಡುಕುತ್ತಾ ಹೊರಡುತ್ತಾರೆ. ಜಟಾಯು ಎಲ್ಲವನ್ನೂ ವಿವರಿಸುತ್ತದೆ. ಆಗ ರಾಮ–

ಸೇತು ಕಟ್ಟಲು ಬೇಕು। ಸೀತೆಯ ತರಬೇಕು।
ದೂರ್ತ ರಾವಣನ ಗೆಲಬೇಕು। ಸೀತೆಯ।
ಪ್ರೀತಿಯಿಂದ್ಹೋಗಿ ತರಬೇಕು॥

–ಎಂದು ಸೀತೆಯನ್ನು ಬಿಡಿಸಿ ತರುವ ಬಗ್ಗೆ ನಿಶ್ಚಯಿಸುತ್ತಾನೆ.

ಜಾನಪದ ಕವಿಗಳು ರಾಮನನ್ನು ಇಲ್ಲಿ ಅಹಿಂಸಾಪ್ರಿಯನನ್ನಾಗಿ, ಸೀತೆಯ ಬಗ್ಗೆ ಅಪಾರ ಪ್ರೀತಿಯಿಟ್ಟಿರುವ ಪ್ರತಿಶ್ರೇಷ್ಠನನ್ನಾಗಿ ಚಿತ್ರಿಸಿದ್ದಾರೆ.

ವಾಲ್ಮೀಕಿ ರಾಮಾಯಣದಲ್ಲಾಗಲೀ, ಇತರ ರಾಮಾಯಣದಲ್ಲಾಗಲೀ, ಕಾಣದಿರುವ, ಜನಸಾಮಾನ್ಯನ ನಿತ್ಯ ಜೀವನಕ್ಕೆ ಹತ್ತಿರವಾದ ಜೀವನಾನುಭವಗಳನ್ನು ಜಾನಪದ ಕವಿಗಳು ತಮ್ಮ ಕೃತಿಗಳಲ್ಲಿ ಹೇಳಿದಾರೆ.

*

---

(28ನೇ ಪುಟದಿಂದ)

ಶಬರಿಯ ಮುಗ್ಧ ಭಕ್ತಿ, ಶ್ರೀರಾಮನ ಭಕ್ತವತ್ಸಲತೆಯನ್ನು ಕಣ್ಣಾರೆ ಕಂಡ ಲಕ್ಷ್ಮಣನಿಗೆ ಎಲ್ಲಿಲ್ಲದ ಬೆರಗು!

ಶ್ರೀರಾಮ ಹಣ್ಣು ತಿಂದು ಉಗುಳಿದ ಬೀಜಗಳನ್ನು ಹಕ್ಕಿ ಹಾರಿಬಂದು ಕುಕ್ಕಿಕೊಂಡೊಯ್ಯುತ್ತವೆ. ಧನ್ಯ ಧನ್ಯ! ಶ್ರೀರಾಮ ಪ್ರಸಾದವು ನಮಗೆ ದೊರಕಿತೆಂದು ಸಂತೋಷಭರದಲ್ಲಿ ಹಾರಾಡುತ್ತವೆ.

ಶ್ರೀರಾಮಚಂದ್ರ, ಶಬರಿಯ ಅಂತಃಕರಣದ ಅತಿಥ್ಯ ಸ್ವೀಕರಿಸಿ, ಹಣ್ಣು ತಿಂದು ಕೈತೊಳೆದುಕೊಂಡು ಹೊರಡಲನುಗುಣವಾಗಿ 'ಹೋಗಿ ಬರುವೆವು' ಎಂದು ಬೀಳ್ಕೊಳ್ಳುತ್ತ, "ನೀಡಿದಂಥ ಸವಿಹಣ್ಣು ತಿಂದು ಸಂತೋಷವಾಯಿತೆಂದು" ನುಡಿದು, ವರದ ಹಸ್ತವನ್ನು ಚಾಚಿ 'ಸ್ವಸ್ತಿ' ಎಂದು, ಲಕ್ಷ್ಮಣನೊಡನೆ ಹೊರಡುತ್ತಾನೆ. ಕಾಡು ಕಣಿವೆಯ ಸೀಳುದಾರಿಯಲ್ಲಿ ಹೆಜ್ಜೆ ಹಾಕುತ್ತ ದೂರ ದೂರ ಹೋಗಿಬಿಡುತ್ತಾನೆ.

ಈ ಬಗೆಯಲ್ಲಿ ಚಿತ್ರಿತವಾದ, ಶಬರಿ ಶ್ರೀರಾಮಚಂದ್ರನನ್ನು ಸ್ವಾಗತಿಸಿ, ಸತ್ಕರಿಸಿದ, ಪ್ರಸಂಗ ಮನಂಬುಗುವಂತಿದೆ. ಇಡೀ ಕಾಡಿನ ಪ್ರತೀಕವೆಂಬಂಥ ಶಬರಿಯ ಮನಸ್ಸು, ಮಾತು ಕ್ರಿಯೆಗಳೆಲ್ಲ ಇಲ್ಲಿ ಜೀವಂತವಾಗಿ ಕೆಲಸಮಾಡಿವೆ. ಶ್ರೀರಾಮನ ಹಿತ ಮಿತವಾದ ಮಾತು, ಎಂಜಲ ಸೇವಿಸುವಲ್ಲಿಯ ಭಕ್ತವತ್ಸಲತೆ ಆತನ ಹೈಮಾಚಲದಂಥ ಗಂಭೀರೋನ್ನತ ವ್ಯಕ್ತಿತ್ವಕ್ಕೆ ಶೋಭಿಸುವಂತಿವೆ. ಕಾಡನ್ನೇ ಜುಮ್ಮೆಗಟ್ಟಿಸಿದ ಶಬರಿಯ ಭಕ್ತಿ ಶ್ರೀರಾಮಚಂದ್ರನ ಭಕ್ತಿಕಂಪನ ಕಂಡ ಲಕ್ಷ್ಮಣನ 'ಹನಿಗಣ್ಣಿನ ಬೆರಗು' ಸಹಜ ಸುಂದರವಾಗಿ ಸಾಕ್ಷಾತ್ಕಾರಗೊಂಡಿದೆ.

ಭಕ್ತವತ್ಸಲನ ಕರುಣೆ
ಪ್ರೀತಿಗಳಿಗಿಲ್ಲ–ಅಂತಪಾರ
ಒಲಿದು ಬಂದನಿವ
ತಿಂದ ನೆಂಜಲವ ಒಲುಮೆಗೆ ಎಂಜಲಿಲ್ಲ

ಎಂಬ ಒಲುಮೆಯ ವಿಲಕ್ಷಣಾಂಶ ಕವನದಲ್ಲಿ ಅಂತರಂಗದ ಅರಳಾಗಿ ಹೊಮ್ಮಿದೆ.

ಭಕ್ತವತ್ಸಲ ಶ್ರೀರಾಮಚಂದ್ರ ಕಾಡು ಕಣಿವೆಯ ಸೀಳುದಾರಿಯಲ್ಲಿ ದೂರ ದೂರ ಹೋದರೂ ಶ್ರೀ ರಾಮ ರಾಮ, ಎಂದು ಇಡೀ ಕಾಡು ಕಾಡೇ ಹಾಡುತಿತ್ತು. ಹೀಗೆ ರಾಮನಾಮ ಎಲ್ಲ ಜೀವಿಗಳನ್ನು ಕಾಯಬಲ್ಲದು ಎಂದು ದೃಢ ಭಕ್ತೆ ಶಬರಿ ತೋರಿಸಿಕೊಟ್ಟಿರುವಳು.

---

# ಆಡಳಿತ ನಿರ್ವಾಹಕ ಮಂಡಳಿಯ ತೀರ್ಮಾನಗಳು

ತಿರುಪತಿಯ ತ್ಯಾಗರಾಜಸ್ವಾಮಿ ಉತ್ಸವ ಹಾಗೂ ದೇವಾಲಯ: ಸಮಿತಿಯವರಿಗೆ 1987 ರಲ್ಲಿನ ತ್ಯಾಗರಾಜಸ್ವಾಮಿ ಆರಾಧನಾ ಉತ್ಸವಕ್ಕಾಗಿ ರೂ 30000/ ವನ್ನು ವಂತಿಗೆಯಾಗಿ ನೀಡಲು ತೀರ್ಮಾನಿಸಲಾಯಿತು.

* * * *

ಬಿಹಾರದ ರಾಜಧಾನಿ ಪಾಟ್ನಾದಲ್ಲಿ ಬಿಹಾರ ಸರ್ಕಾರದವರು ಮೂವತ್ತು ವರ್ಷಗಳ ಗುತ್ತಿಗೆಯಾಗಿ ತಿ. ತಿ. ದೇ. ಗಳಿಗೆ ನೀಡಿದ ಜಮೀನಿನಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪವನ್ನು ನಿರ್ಮಿಸಲು ಆಂಧ್ರ ಪ್ರದೇಶದ ಸರ್ಕಾರದ ಅನುಮೋದನೆಗಾಗಿ ಕಳುಹಿಸಬೇಕೆಂದು ತೀರ್ಮಾನಿಸಲಾಯಿತು.

* * * *

ಒರಿಸ್ಸಾದ ರಾಜಧಾನಿ ಭುವನೇಶ್ವರದ ನಾಗಪಲ್ಲಿ ಬಳಿಯಲ್ಲಿ 2 ಎಕರೆ ಜಮೀನನ್ನು ತಿ. ತಿ. ದೇ. ಗಳು ಪಡೆದು ಅಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪವನ್ನು ನಿರ್ಮಿಸಲು ಆಂಧ್ರ ಪ್ರದೇಶ ಸರ್ಕಾರದ ಅನುಮೋದನೆಗಾಗಿ ಕಳುಹಿಸಬೇಕೆಂದು ತೀರ್ಮಾನಿಸಲಾಯಿತು.

* * * *

ತಿ. ತಿ: ದೇ. ಕಲ್ಯಾಣ ಮಂಟಪಗಳಲ್ಲಿ ತಿ. ತಿ. ದೇ. ಉದ್ಯೋಗಿಗಳಿಗೆ, ಅವರ, ಅವರ ಮಕ್ಕಳ ವಿವಾಹೋಪನಯನಗಳಿಗಾಗಿ 1/3 ಭಾಗದ ಬಾಡಿಗೆ ರಿಯಾಯಿತಿ ನೀಡುವ ಕ್ರಮವನ್ನು ಅನುಮೋದಿಸಲಾಯಿತು.

* * * *

ಪೆಹಲಿಯ ಆಂಧ್ರ ಶಿಕ್ಷಣ ಸಂಸ್ಥೆಯ ಆಡಳಿತ ಮಂಡಳಿಗೆ, ತಿ. ತಿ. ದೇ. ಗಳ ಪ್ರತಿನಿಧಿಯಾಗಿ ತಿ. ತಿ. ದೇ. ಬೋರ್ಡ್ ಅಧ್ಯಕ್ಷರನ್ನು ನಾಮಕರಣ ಮಾಡಲು ತೀರ್ಮಾನಿಸಲಾಯಿತು.

* * * *

ತಿರುಮಲೆಯಲ್ಲಿ ವಸತಿಗಾಗಿ ಈ ಮೊದಲು ಇದ್ದ ಪದ್ಧತಿಯಂತೆ 10% ಮೀಸಲು ವಸತಿಯನ್ನು-ಮುಂಗಡ ಕಾಯ್ದಿರಿಸುವಿಕೆಯನ್ನು 25% ಕ್ಕೆ ಏರಿಸಲು ತೀರ್ಮಾನಿಸಲಾಯಿತು.

* * * *

ತಿರುಮಲೆಯ ಶ್ರೀ ವೆಂಕಟೇಶ್ವರ ಸ್ವಾಮಿ ದೇವಾಲಯದಲ್ಲಿ ಅಕ್ಟೋಬರ್ 1985 ಹಾಗೂ ಅಕ್ಟೋಬರ್ 1986 ರಲ್ಲಿನ ಭಕ್ತರ ಸಂಖ್ಯೆ, ವಿಶೇಷ ಪ್ರವೇಶದ ಟಿಕೆಟ್‌ಗಳ ಸಂಖ್ಯೆ, ಹುಂಡಿ, ಪ್ರಸಾದಗಳ ಮಾರಾಟ, ಅರ್ಜಿತ ಸೇವೆಗಳಲ್ಲಿನ ಭಾಗವಹಿಸಿ ವಿಕೆಯನ್ನೂ, ನವಂಬರ್ ಡಿಸೆಂಬರ್ 1985 ರ ಹಾಗೂ 1986 ಅದೇ ತಿಂಗಳುಗಳ ಆದಾಯ ಹುಂಡಿ, ವಗಪ್ಪಡಿ, ಅರ್ಜಿತ ಸೇವೆಗಳು, ಯಾತ್ರಿಕ ಸಂಖ್ಯೆಗಳನ್ನು ಪರಿಶೀಲಿಸಲಾಯಿತು.

* * * *

ತಿ. ತಿ. ದೇ. ಧಾರ್ಮಿಕ ಗ್ರಂಥಗಳ ವ್ಯಾಪಕ ಪ್ರಸಾರಕ್ಕಾಗಿ, ಅವುಗಳ ಮಾರಾಟದಲ್ಲಿ ಹಲವು ರಿಯಾಯಿತಿಗಳನ್ನು ನೀಡಲು ತೀರ್ಮಾನಿಸಲಾಯಿತು. ಆ ರಿಯಾಯಿತಿ ದರಗಳು ಹೀಗಿವೆ.

| | |
|---|---|
| 1000 ರೂಗಳಿಗಿಂತ ಹೆಚ್ಚಿಗೆ ಕೊಂಡಾಗ | 30% |
| 500 ರೂಗಳಿಂದ 1000 ರೂವರೆಗೆ | 25% |
| 100 ರೂಗಳಿಂದ 500 ರೂವರೆಗೆ | 15% |

ವಿಶೇಷ ಹಬ್ಬ ಹರಿದಿನಗಳ ಪುಸ್ತಕ ಪ್ರದರ್ಶನ ಮಾರಾಟ ಸಮಯಗಳಲ್ಲಿ 2 ರೂಗಳಿಗಿಂತ ಹೆಚ್ಚಿನ ಕೊಳ್ಳುವಿಕೆಗೂ 30% ರಿಯಾಯಿತಿ ನೀಡಲು ತೀರ್ಮಾನಿಸಲಾಯಿತು. ವಿ. ಪಿ. ಪಿ. ಸೌಲಭ್ಯಕ್ಕಾಗಿ ಪೂರ್ತಿ ಬೆಲೆಯನ್ನು ಹೊಂದಬೇಕೆಂದೂ ತೀರ್ಮಾನಿಸಲಾಯಿತು.

* * * *

ಮದರಾಸಿನ ಶ್ರೀ ಜಿ. ಟಿ. ಸಂಪತ್ತು ಅವರ ಹೆಸರಿನಲ್ಲಿ ಅವರು ನೀಡಿದ ದತ್ತಿಯ ಬಡ್ಡಿ ಹಣದಿಂದ ಆಂಡಾಳ್ ತಿರುವಾಡಿಪೂರಂ ದಿನದಂದು ತಿರುಚಾನೂರಿನ ಶ್ರೀ ಪದ್ಮಾವತೀ ಅಮ್ಮನವರಿಗೆ ತಿರುಚ್ಚಿ ಉತ್ಸವ, ತಿರುಮಂಜನ. ಗಜವಾಹನ ಮೊದಲಾದವನ್ನು ನಡೆಸಲು ಒಪ್ಪಲಾಯಿತು.

* * * *

ತಿರುಪತಿಯ ಕಪಿಲತೀರ್ಥದಲ್ಲಿ ನೆಲೆಸಿರುವ ಶ್ರೀ ವೇಣುಗೋಪಾಲಸ್ವಾಮಿ ದೇವಾಲಯದಲ್ಲಿ ಪೂಜಾರಾಧನೆಗಳಿಗಾಗಿ ದಿತ್ತವನ್ನು ನಿರ್ಣಯಿಸಲಾಯಿತು.

* * * *

ತಿರುಪತಿಯ ಶ್ರೀ ಪದ್ಮಾವತೀ ಮಹಿಳಾ ವಿಶ್ವವಿದ್ಯಾಲಯದ ವೆಚ್ಚಗಳಿಗಾಗಿ 1986–1987 ಸಾಲಿಗೆಂದು 15 ಲಕ್ಷ ರೂಗಳನ್ನು ಮಂಜೂರು ಮಾಡಲಾಯಿತು.

* * * *

ತಿರುಮಲೆಯ ಗೋಗರ್ಭದ ಬಳಿ ತಿ. ತಿ. ದೇ. ಗಳು ಗುತ್ತಿಗೆಗೆ ನೀಡಿದ ಜಮೀನಿನಲ್ಲಿ ಧ್ಯಾನ ಮಂದಿರವಾಗಿ ಮೊದಲ ಅಂತಸ್ತನ್ನು ನಿರ್ಮಿಸುವುದಕ್ಕೆ ವ್ಯಾಸಾಶ್ರಮ ಮಠದವರಿಗೆ ಒಪ್ಪಿಗೆ ನೀಡಲಾಯಿತು

* * * *

ಈ ಮೊದಲು ಎಸ್. ವಿ. ಆರ್. ಆರ್. ಆಸ್ಪತ್ರೆಯ ಸೂಪರಿಂಟೆಂಡೆಂಟ್ ಆಗಿದ್ದ ಡಾ॥ ವೆಂಕಟಸ್ವಾಮಿ ಅವರನ್ನು, ವಿಶೇಷ ಆಧುನಿಕ ಆಸ್ಪತ್ರೆಯ ವಿಶೇಷ ಕರ್ತವ್ಯಾಧಿಕಾರಿಯನ್ನಾಗಿ ತೆಗೆದುಕೊಳ್ಳಲು ತೀರ್ಮಾನಿಸಲಾಯಿತು.

## ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್ ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.

—ತಿ. ತಿ. ದೇ.

## ಭುವನೇಶ್ವರದಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪ

ಸುಮಾರು ನಲವತ್ತು ಲಕ್ಷರೂಗಳ ಅಂದಾಜು ವೆಚ್ಚದಲ್ಲಿ ಎರಡು ಸಭಾಭವನವಿರುವ ಕಲ್ಯಾಣ ಮಂಟಪವನ್ನು ಭುವನೇಶ್ವರದಲ್ಲಿ ನಿರ್ಮಿಸಲು ತಿ. ತಿ. ದೇ. ಯೋಜಿಸಿದೆ.

ಸ್ಥಳೀಯ ಆಂಧ್ರ ಸಾಂಸ್ಕೃತಿಕ ಸಂಘದ ಆಶ್ರಯದಲ್ಲಿ ಮಾತನಾಡುತ್ತ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರು ಈ ವಿಷಯವನ್ನು ತಿಳಿಸಿದರು.

ತಿ. ತಿ. ದೇ. ಗಳ ಬೋರ್ಡ್ ಅಧ್ಯಕ್ಷ ಶ್ರೀ ಡಿ. ಸೀತಾರಾಮಯ್ಯ ಹಾಗೂ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರುಗಳು ಒರಿಸ್ಸಾದ ಮುಖ್ಯ ಮಂತ್ರಿ ಶ್ರೀ ಜೆ. ಬಿ. ಪಟ್ನಾಯಕ್ ಅವರನ್ನು ಭೇಟಿಮಾಡಿದ್ದರು. ಸದರಿ ಕಲ್ಯಾಣ ಮಂಟಪಕ್ಕೆ ಎರಡು ಎಕರೆ ಸೂಕ್ತ ಸ್ಥಳವನ್ನು ನೀಡುವ ಬಗ್ಗೆ ಮುಖ್ಯಮಂತ್ರಿ ಭರವಸೆ ನೀಡಿದರು. ಕಲ್ಯಾಣ ಮಂಟಪವನ್ನು ಮೂರು ವರ್ಷಗಳಲ್ಲಿ ನಿರ್ಮಿಸಲಾಗುವುದು.

## ಹೈದರಾಬಾದಿನಲ್ಲಿ ವಾಗ್ಗೇಯಕಾರ ಆರಾಧನೆ

ಹೈದರಾಬಾದಿನ ಬರಕತ್ ಪುರದ ಆಂಧ್ರ ಯುವತಿ ಮಂಡಳಿ ಸಭಾಭವನದಲ್ಲಿ ಈಚೆಗೆ ತನ್ಮಯಿ ಸಂಸ್ಥೆ ಹಾಗೂ ತಿ. ತಿ. ದೇ. ಗಳ ದಾಸಸಾಹಿತ್ಯ ಪ್ರಾಜೆಕ್ಟ್‌ಗಳ ಸಂಯುಕ್ತ ಆಶ್ರಯದಲ್ಲಿ ವಾಗ್ಗೇಯಕಾರ ಆರಾಧನೆಯು ನಡೆದು ಯಶಸ್ವಿಯಾಯಿತು.

ಪುರಂದರ ದಾಸರ ಕೃತಿಗಳನ್ನು ಕರ್ನಾಟಕದ ಖ್ಯಾತ ಸಂಗೀತಗಾರ ಶ್ರೀ ಆರ್. ಕೆ. ಶ್ರೀಕಂಠನ್ ಅವರು, ಶ್ರೀಮತಿ ಮನೋರಮ (ವಯೋಲಿನ್) ಶ್ರೀ ಟಿ. ಎ. ಎಸ್. ಮಣಿ (ಮೃದಂಗ) ಶ್ರೀ ರಾಜಗೋಪಾಲನ್ (ಘಟ) ಅವರುಗಳೊಡನೆ ಸೊಗಸಾದ ರಾಗಗಳಲ್ಲಿ ಹಾಡಿ ರಂಜಿಸಿದರು.

ಅದಕ್ಕೂ ಮೊದಲು ದಾಸಸಾಹಿತ್ಯ ಪ್ರಾಜೆಕ್ಟ್‌ನ ವಿಶೇಷಾಧಿಕಾರಿ ಕೆ. ಅಪ್ಪಣ್ಣಾಚಾರ್ಯ ಅವರು ಪುರಂದರದಾಸರ ಜೀವನ ಹಾಗೂ ಕೃತಿಗಳ ಬಗ್ಗೆ ಘನವಾದ ಉಪನ್ಯಾಸ ನೀಡಿದರು. ಕಾರ್ಯಕ್ರಮವನ್ನು ಶ್ರೀ ಪಿ. ವಿ. ಆರ್. ಕೆ. ಪ್ರಸಾದರು ಆಯೋಜಿಸಿದ್ದರು.



## ವೈಭವದ ತೆಪ್ಪೋತ್ಸವ

ತಿರುಮಲೆಯಲ್ಲಿ ಮಾರ್ಚ್ 11 ರ ಬುಧವಾರದಿಂದ ಐದು ದಿನಗಳ ಕಾಲ ಶ್ರೀ ವೆಂಕಟೇಶ್ವರ ಸ್ವಾಮಿ ವಾರ್ಷಿಕ ಬ್ರಹ್ಮೋತ್ಸವವು ಅತ್ಯಂತ ಸಡಗರ ಹಾಗೂ ವೈಭವದಿಂದ ನಡೆಯಿತು.

ಐದು ದಿನಗಳೂ ಉತ್ಸವ ಮೂರ್ತಿ ಶ್ರೀ ಭೂದೇವೀ ಸಹಿತವಾಗಿ ತಿರುವೀಧಿಗಳಲ್ಲಿ ಮೆರವಣಿಗೆ ಹೊರಟು, ಪುಷ್ಕರಿಣಿಯನ್ನು ಸೇರಿದ ನಂತರ, ಮೊದಲದಿನ ಶ್ರೀರಾಮ ಸೀತಾ ಲಕ್ಷ್ಮಣರನ್ನೂ ಎರಡನೆಯದಿನ ಶ್ರೀ ಕೃಷ್ಣ ರುಕ್ಮಿಣಿಯರನ್ನೂ, 13, 14, 15, ದಿನಾಂಕಗಳಲ್ಲಿ ಮಲೆಯಪ್ಪ ಸ್ವಾಮಿ, ಶ್ರೀಭೂದೇವಿಯರನ್ನೂ ತೆಪ್ಪೋತ್ಸವದಲ್ಲಿ ಮೆರೆಸಲಾಯಿತು.

ಭಾನುವಾರದಂದು ಪುಷ್ಕರಿಣೀ ತೀರದಲ್ಲಿ 75000 ಮಂದಿಗೂ ಹೆಚ್ಚಿಗೆ ನೆರೆದು ತೆಪ್ಪೋತ್ಸವವನ್ನು ವೀಕ್ಷಿಸಿದರು. ಪ್ರತಿ ರಾತ್ರಿಯೂ ತೆಪ್ಪೋತ್ಸವವನ್ನು 20000 ಕ್ಕೂ ಹೆಚ್ಚು ಮಂದಿ ವೀಕ್ಷಿಸಿದರು. ಮೊದಲ ಎರಡು ದಿನಗಳಲ್ಲಿ ದೇವಾಲಯದ ಆದಾಯ 19. 90 ಲಕ್ಷರೂಗಳಾಗಿದ್ದಿತು.

ಹಿಂದಿನ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿರೆಡ್ಡಿ ಯವರು ಭಾನುವಾರ ರಾತ್ರಿ ತೆಪ್ಪೋತ್ಸವದಲ್ಲಿ ಭಾಗವಹಿಸಿದ್ದರು. ಹಿಂದಿನ ರೆವಿನ್ಯೂ ಸೆಕ್ರೆಟರಿ ಶ್ರೀ ಜಯಸಿಂಹ ಅವರೂ, ಹಿಂದಿನ ಪ್ರೆಸ್‌ಕೌನ್ಸಿಲ್ ಅಧ್ಯಕ್ಷ ಶ್ರೀ ಗ್ರೋವರ್ ಅವರೂ ಹಿಂದಿನ ದಿನಗಳಲ್ಲಿ ತೆಪ್ಪೋತ್ಸವವನ್ನು ಸಂದರ್ಶಿಸಿದರು.

## ಅನ್ನದಾನಯೋಜನೆಗೆ ವಂತಿಗೆಗಳಿಗಾಗಿ ವಿನಂತಿ

ತಿರುಮಲೆಯಲ್ಲಿ ಯಾತ್ರಿಕರಿಗಾಗಿ ತಿ. ತಿ. ದೇ. ಗಳು ಕೈಗೊಂಡಿರುವ ಶ್ರೀ ವೆಂಕಟೇಶ್ವರ ಅನ್ನದಾನ ಯೋಜನೆಗೆ ಉದಾರವಾಗಿ ವಂತಿಗೆಗಳನ್ನು ನೀಡಬೇಕೆಂದು ಮಹಾರಾಷ್ಟ್ರದ ರಾಜ್ಯಪಾಲರು ಶ್ರೀ ಶಂಕರದಯಾಳ ಶರ್ಮ ಅವರು ಮನವಿಮಾಡಿಕೊಂಡಿದ್ದಾರೆ.

ಬೊಂಬಾಯಿನ ರಾಜಭವನದಲ್ಲಿ ತಿ. ತಿ. ದೇ. ಬೋರ್ಡ್ ಅಧ್ಯಕ್ಷ ಶ್ರೀ ಡಿ. ಸೀತಾರಾಮಯ್ಯ ಮತ್ತು ಕಾರ್ಯ ನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರು ಹಾಗೂ ಅಲ್ಲಿನ ಉದ್ಯೋಗಪತಿಗಳ ಸಮಾವೇಶದಲ್ಲಿ ರಾಜ್ಯಪಾಲರು ಅಲ್ಲಿನ ಪರಿಶ್ರಮವೇತ್ತರಿಗೆ ಈ ಮನವಿಯನ್ನು ಮಾಡಿದರು.

ತಿರುಮಲೆಯ ಯಾತ್ರಿಕ ಸಾಂದ್ರತೆ, ಅನ್ನದಾನ ಯೋಜನೆಯ ವಿವರಗಳನ್ನು ನೀಡುತ್ತ ಶ್ರೀ ಡಿ. ಸೀತಾರಾಮಯ್ಯ ಅವರು ತಿರುಮಲೆಗೆ ದಿನವೂ ಮೂವತ್ತು ಸಾವಿರ ಮಂದಿ ಯಾತ್ರಿಕರು ದೇವರ ದರ್ಶನ ಹೊಂದಲು ಬರುತ್ತಿರುವರೆಂದೂ, ಅವರಿಗೆ ಉಚಿತ ಊಟ ನೀಡುವ ಶ್ರೀ ವೆಂಕಟೇಶ್ವರ ಅನ್ನದಾನ ಯೋಜನೆಯಲ್ಲಿ, ದಾನಿಗಳಿಂದ ಹತ್ತು ಲಕ್ಷರೂಗಳ ಗುಣಕಗಳಲ್ಲಿ ದತ್ತಿ ಪಡೆದು ಅಷ್ಟೇ ಮೊತ್ತವನ್ನು ಕೂಡಿಸಿ ಬ್ಯಾಂಕಿನಲ್ಲಿಟ್ಟು ಬರುವ ಬಡ್ಡಿಯಿಂದ ಉಚಿತ ಭೋಜನ ವ್ಯವಸ್ಥೆ ಮಾಡುತ್ತಿರುವುದಾಗಿಯೂ, ಈಗ ಸುಮಾರು 15 ಸಾವಿರ ಮಂದಿಗೆ ದಿನವೂ ಭೋಜನ ದೊರೆಯುತ್ತಿರುವುದೆಂದೂ ತಿಳಿಸಿದರು.

## ತಿರುಮಲೆಯಲ್ಲಿ ಪ್ರಮುಖರು

ಆಂಧ್ರಪ್ರದೇಶದ ಶ್ರೇಷ್ಠ ನ್ಯಾಯಾಲಯದ ನ್ಯಾಯ ಮೂರ್ತಿ:- ಆಂಧ್ರ ಪ್ರದೇಶದ ಶ್ರೇಷ್ಠ ನ್ಯಾಯಾಲಯದ ನ್ಯಾಯಮೂರ್ತಿ ಶ್ರೀ ಸಿ. ರಾಮರಾವ್ ಅವರು ಮಾರ್ಚ್ ಮೂರರ ಸಂಜೆ ಕುಟುಂಬ ಸಹಿತರಾಗಿ ತಿರುಮಲೆಗೆ ಆಗಮಿಸಿ ದೇವರನ್ನು ಆರಾಧಿಸಿದರು. ನ್ಯಾಯ ಮೂರ್ತಿಗಳ ಅತಿಥಿ ಸೌಕರ್ಯಗಳನ್ನು ತಿ. ತಿ. ದೇ. ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್ (ರಿಸೆಪ್ಷನ್) ಆಂಜನೇಯುಲು ಅವರು ನೋಡಿಕೊಂಡರು.

ಆಂಧ್ರಪ್ರದೇಶ್ ಶ್ರೇಷ್ಠ ನ್ಯಾಯಾಲಯದ ಪ್ರಧಾನ ನ್ಯಾಯಮೂರ್ತಿ:- ಆಂಧ್ರ ಪ್ರದೇಶದ ಶ್ರೇಷ್ಠ ನ್ಯಾಯಾಲಯದ ಪ್ರಧಾನ ನ್ಯಾಯಮೂರ್ತಿ ಶ್ರೀ ಸಿ. ಭಾಸ್ಕರನ್ ಅವರು ಶನಿವಾರ (ಮಾರ್ಚ್ 7) ರಂದು ತಿರುಮಲೆಗೆ ಕುಟುಂಬ ಸಹಿತ ಆಗಮಿಸಿ ದೇವರನ್ನು ದೇವರನ್ನು ಆರಾಧಿಸಿದರು.

ಬೆಟ್ಟವನ್ನು ತಲುಪಿದ ಪ್ರಧಾನ ನ್ಯಾಯಮೂರ್ತಿಗಳನ್ನು ಉಪಕಾರ್ಯ ನಿರ್ವಹಣಾಧಿಕಾರಿ ಶ್ರೀ ಮುನಿಕೃಷ್ಣನ್, ಎ.ಇ.ಓ. (ರಿಸೆಪ್ಷನ್) ಶ್ರೀ ಅಂಜನೇಯುಲು ಅವರುಗಳು ಸ್ವಾಗತಿಸಿದರು. ದೇವಾಲಯದಲ್ಲಿ ಅಧಿಕಾರಿ ಶ್ರೀ ಪೀರಯ್ಯ ಅವರು ದೇವಾಲಯದ ಚರಿತ್ರೆ ಮಹಿಮೆಗಳನ್ನು ವಿವರಿಸಿದರು.

**ಮುಂದಿನ ಸಂಚಿಕೆಯಲ್ಲಿ .... .... ...**

**ಸಪ್ತಗಿರಿ. — ಮೇ 1987**

**ಜ್ಞಾನ ಸಂಪನ್ನೆ ಚೂಡಾಲಾ**
– ರಘುಸುತ

**ಬೇಲೂರು ಹಳೇಬೀಡು**
– ದೇವನೂರು ಪಾಂಡುರಂಗ

**ಓಂಕಾರ**
– ಅದ್ಯ ರಾಮಾಚಾರ್ಯ

**ಸತ್ಯಬೋಧ ತೀರ್ಥರು**
– ಕೆ. ವಿ. ದೇಶಪಾಂಡೆ

**ಭಕ್ತಕವಿ ರುದ್ರಭಟ್ಟ**
– ಗುರುನಾಥ ಜಹಾಗೀರದಾರ

ಧಾರಾವಾಹಿ. ಗೋದಾದೇವೀ ಕೃತ ತಿರುಪ್ಪಾವೈನ ಸಚಿತ್ರ ವಿವರಣೆ.

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

**ವಿಶೇಷ ಸೂಚನೆ:** ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ – ಸಂಪಾದಕರು
ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯದಿನಗಳು

## ಮೇ 1987

| | | |
|---|---|---|
| 2. | ಶನಿವಾರ | ಮಧುರಕವಿ ಆಳ್ವಾರ್ ಉತ್ಸವಾರಂಭ |
| 3. | ಭಾನುವಾರ | ಶ್ರೀ ಶಂಕರಾಚಾರ್ಯ ಜಯಂತಿ, ಶ್ರೀ ಭಾಷ್ಯಕಾರ ಶಾತ್ತುಮೊರೆ. |
| 4. | ಸೋಮವಾರ | ಮೊದಲಿಯಾಂಡಾನ್ ವರ್ಷತಿರುನಕ್ಷತ್ರ |
| 11. | ಸೋಮವಾರ | ನಾರಾಯಣವನಂ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವಾರಂಭ, ಧ್ವಜಾರೋಹಣ |
| 12. | ಮಂಗಳವಾರ | ಶ್ರೀ ನೃಸಿಂಹ ಜಯಂತಿ. ತಿರುಪತಿ ಗಂಗಾಜಾತ್ರೆ ಆರಂಭ. |
| 13. | ಬುಧವಾರ | ಶ್ರೀ ಕೂರ್ಮಜಯಂತಿ |
| 15. | ಶುಕ್ರವಾರ | ನಾರಾಯಣವನಂ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಗರುಡೋತ್ಸವ |
| 18. | ಸೋಮವಾರ | ,, ,, ರಥೋತ್ಸವ |
| 19. | ಮಂಗಳವಾರ | ,, ,, ಬ್ರಹ್ಮೋತ್ಸವ ಅವಭೃತ. ಗಂಗಾಜಾತ್ರೆ ಸಮಾಪ್ತಿ |
| 22. | ಶುಕ್ರವಾರ | ಶ್ರೀ ಹನುಮಜ್ಜಯಂತಿ |
| 29. | ಶುಕ್ರವಾರ | ಕರ್ತರಿ ತ್ಯಾಗ. |

ದಕ್ಷಿಣ ಭಾಗದ ಕಮಾಂಡರ್. ಭಾರತದ ದಕ್ಷಿಣ ಸೇನಾಪತಿ ಲೆಫ್ಟಿನೆಂಟ್ ಜನರಲ್ ಶ್ರೀ ಪೂರಿ ಅವರು ಮಾರ್ಚ್ 8 ಭಾನುವಾರ ಮಧ್ಯಾಹ್ನ ತಿರುಮಲೆಗೆ ಕುಟುಂಬ ಸಹಿತವಾಗಿ ಆಗಮಿಸಿ, ದೇವರ ಆರಾಧನೆ ಮಾಡಿದರು. ಉಪ ಕಾರ್ಯನಿರ್ವಹಣಾಧಿಕಾರಿ ಶ್ರೀ ಮುನಿ ಕೃಷ್ಣನ್ ಅವರು ಶ್ರೀಯುತರಿಗೆ ವಸತಿ ಏರ್ಪಾಡುಗಳನ್ನು ಮಾಡಿದರು.

ಶ್ರೀ ಲಂಕಾದ ಪ್ರಧಾನ ನ್ಯಾಯಮೂರ್ತಿ: ಶ್ರೀ ಲಂಕಾ ದೇಶದ ಪ್ರಧಾನ ನ್ಯಾಯಮೂರ್ತಿ ಶ್ರೀ ಶರವಣನ್ ಅವರು ಸತೀಸಹಿತರಾಗಿ ಮಾರ್ಚ್ 10ರ ಮಂಗಳವಾರ ರಾತ್ರಿ ತಿರುಮಲೆಯನ್ನು ಸೇರಿ ದೇವರನ್ನು ಆರಾಧಿಸಿದರು.

ದೇವಾಲಯದ ಅಧಿಕಾರಿಗಳು ಪ್ರಧಾನ ನ್ಯಾಯಮೂರ್ತಿಗಳಿಗೆ ಘನವಾದ ಸ್ವಾಗತವನ್ನು ನೀಡಿ, ಅವರಿಗೆ ಸ್ವಾಮಿಯ ಶೇಷವಸ್ತ್ರ ಬಹುಮಾನ, ಪ್ರಸಾದವನ್ನು ನೀಡಿದರು. ನಂತರ ದಂಪತಿಗಳು ಅನ್ನದಾನ ಯೋಜನೆಯ ಕಾಂಪ್ಲೆಕ್ಸ್ ಅನ್ನು ಸಂದರ್ಶಿಸಿ ಮೆಚ್ಚುಗೆ ವ್ಯಕ್ತಪಡಿಸಿದರು.

## ಶ್ರೀ ರಂಗಂ ರಾಜಗೋಪುರದ ಮಹಾಸಂಪ್ರೋಕ್ಷಣ

ಶ್ರೀರಂಗದ ದೇವಾಲಯದ 236 ಅಡಿ ಎತ್ತರದ (70 ಮೀಟರ್) ದಕ್ಷಿಣ ರಾಜಗೋಪುರ ನಿರ್ಮಾಣ ಪೂರ್ತಿಗೊಂಡು ಮಾರ್ಚ್ 25 ರಂದು ಮಹಾಸಂಪ್ರೋಕ್ಷಣೆ ಯಶಸ್ವಿಯಾಗಿ ನಡೆಯಿತು.

ಏಷಿಯಾ ಖಂಡದಲ್ಲಿ ಅತಿ ಎತ್ತರವಾದ ಈ ರಾಜಗೋಪುರ ಅಹೋಬಿಲ ಮಠದ ಶ್ರೀಮದ್ ಅಳಗಿಯ ಸಿಂಗರ್ ಅವರ ನೇತೃತ್ವದಲ್ಲಿ ನಿರ್ಮಾಣ ಹೊಂದಿತು.

ರಂಗ–ರಂಗ–ಜಯಘೋಷಗಳ ನಡುವೆ ಮರವಣಿಗೆಯಲ್ಲಿ ತಂದ ಮಂತ್ರಪೂರಿತವಾದ ಕಾವೇರಿ ಜಲದಿಂದ ರಾಜಗೋಪುರದ 13 ಕಲಶಗಳನ್ನು ಅಭಿಷೇಚಿಸಲಾಯಿತು.

ವಿಶೇಷವಾಗಿ ನಿರ್ಮಿಸಿದ ಅಟ್ಟಣೆಯ ಮೇಲೆ ನಿಂತು ಮಹಾಸಂಪ್ರೋಕ್ಷಣೆಯನ್ನು ಭಾರತದ ಉಪರಾಷ್ಟ್ರಪತಿ ಆರ್. ವೆಂಕಟರಾಮನ್, ತಮಿಳುನಾಡಿನ ಮುಖ್ಯಮಂತ್ರಿ ಎಂ ಜಿ ರಾಮಚಂದ್ರನ್ ಅವರುಗಳು ಕುಟುಂಬ ಸಹಿತರಾಗಿ ವೀಕ್ಷಿಸಿದರು. ತಮಿಳುನಾಡಿನ ಹಲವಾರು ಮಂತ್ರಿಗಳೂ ಉಪಸ್ಥಿತರಿದ್ದರು. ಉತ್ಸವ ಮೂರ್ತಿ ಹಾಗೂ ರಾಜಗೋಪುರ ಚಿತ್ರಗಳನ್ನು ಒಳಗಡೆಯ ರಕ್ಷಾಪುಟದಲ್ಲಿ ಕಾಣಬಹುದು.



Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

